ಕರ್ಣಾಟಕ ಕಾವ್ಯಮಂಜರಿ

# ಆಂಡಯ್ಯ ಮಹಾಕವಿ

ವಿರಚಿತಂ

# ಕಬ್ಬಿಗರ ಕಾವಂ.

[೨]

ಎಸ್. ಜಿ. ನರಸಿಂಹಾಚಾರ್,

ಮ. ಆ. ರಾಮಾನುಜೈಯಂಗಾರ್,

ಇವರಿಂದ ಪರಿಷ್ಕರಿಸಲ್ಪಟ್ಟು ಟಿಪ್ಪಣಿಯೊಡನೆ

:o:

ಕರ್ಣಾಟಕ ಕಾವ್ಯಮಂಜರಿ ಪ್ರೊಪ್ರೈಟರುಗಳಿಗಾಗಿ

ಮೈಸೂರು

ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

(ದ್ವಿತೀಯ ಮುದ್ರಣಂ ಶೋಧಿಸಲ್ಪಟ್ಟುದು)



ಈ ಪುಸ್ತಕವು ಮೈಸೂರಲ್ಲಿರುವ ಕರ್ಣಾಟಕಕಾವ್ಯಮಂಜರಿ ಆಫೀಸ್ ಮ್ಯಾನೇಜಿಂಗ್ ಪ್ರೊಪ್ರೈಟರ್ ಮ. ಕುಮಾರಸ್ವಾಮಿ ತಿರುಮಲಾಚಾರ್ಯರಲ್ಲಿ ದೊರೆಯುತ್ತದೆ.

## ಪ್ರಥಮ ಮುದ್ರಣದ ಉಪೋದ್ಘಾತ.

ಐದು ಪ್ರತಿಗಳ ಸಹಾಯದಿಂದ ಈ ಗ್ರಂಥವನ್ನು ಮುದ್ರಿಸಲಾಯಿತು. ಈ ಪ್ರತಿಗಳಲ್ಲಿ,

ಮೈಸೂರು ವೆಸ್ಲಿಯನ್ ಮಿಷನ್ ಹೈಸ್ಕೂಲ್ ಮಾಜಿ ಮುನಷಿ, ಮ|| ರಾ|| ಅನ್ನದಾನಿ ಭಟ್ಟರ ಶಾಮಣ್ಣನವರು ಕಳುಹಿಸಿಕೊಟ್ಟದ್ದೊಂದು. ಇದೇ ಕ|| ಪುಸ್ತಕ.

ಮೈಸೂರು ಮಹಾರಾಜರವರ ಕಾಲೇಜು ಕನ್ನಡ ಮುನಷಿ, ಮ|| ರಾ|| ಕರಿಬಸಪ್ಪ ಶಾಸ್ತ್ರಿಗಳು ಕಳುಹಿಸಿಕೊಟ್ಟ ಪ್ರತಿಗಳೆರಡು. ಅವುಗಳಲ್ಲಿ ಒಂದಕ್ಕೆ ಗ|| ಎಂದೂ, ಮತ್ತೊಂದಕ್ಕೆ ಘ|| ಎಂದೂ ಹೆಸರಿಟ್ಟದೆ.

ಕೇತನಹಳ್ಳಿಯಲ್ಲಿರುವ ಮ|| ರಾ|| ರಾಮಣ್ಣನವರು ಕಳುಹಿಸಿದ್ದೊಂದು. ಇದಕ್ಕೆ ಖ|| ಎಂದು ಹೆಸರು.

ಕೇತನಹಳ್ಳಿಯಲ್ಲಿರುವ ಮ|| ರಾ|| ಗಂಗವಾಡಿ ಉಪಾಧ್ಯಾಯರು ನರಸಿಂಹಯ್ಯನವರಲ್ಲಿ ಒಂದು ಅಸಮಗ್ರ ಪ್ರತಿಯಿತ್ತು. ಅಲ್ಲೇ ಹೋಗಿ ಅದನ್ನು ಸಂಪ್ರತಿಸಿ ನೋಡಲಾಯಿತು.

ಈ ಪ್ರತಿಗಳಲ್ಲಿ ಖ|| ಪುಸ್ತಕವು ಕ|| ಪುಸ್ತಕದ ಪ್ರತಿಯು ಹಾಗೆಯೂ, ಘ|| ಪುಸ್ತಕವು ಗ|| ಪುಸ್ತಕದ ಪ್ರತಿಯು ಹಾಗೆಯೂ ತೋರುತ್ತದೆ. ನಮಗೆ ದೊರೆತ ಪ್ರತಿಗಳಲ್ಲಿ ಬಹಳ ಪುರಾತನ ಪ್ರತಿಯು ಬಹುಶಃ ೬೦ — ೭೦ ವರ್ಷಗಳ ಹಿಂದೆ ಬರೆದಂತೆ ತೋರುತ್ತದೆ.

ಪ್ರತಿಗಳನ್ನು ದಯವಿಟ್ಟು ಕಳುಹಿಸಿಕೊಟ್ಟದುದಕಾಗಿ, ಈ ಮಹನೀಯರಿಗೆ ನಾವು ಬಹಳ ಕೃತಜ್ಞರಾಗಿರುತ್ತೇವೆ.

1893. S. G. N. & M. A. R.

# ದ್ವಿತೀಯ ಮುದ್ರಣದ ಉಪೋದ್ಘಾತ.

ದ್ವಿತೀಯ ಮುದ್ರಣವು ಪ್ರಥಮ ಮುದ್ರಣದಲ್ಲಿ ದೊರಕಿದ್ದ ೫ ಪ್ರತಿಗಳಿಂದಲೇ ಸಿದ್ಧವಾಯಿತು. ಅವುಗಳಲ್ಲದೆ ಮತ್ತೆಯಾವ ಪ್ರತಿಗಳೂ ದೊರೆಯಲಿಲ್ಲ.

ಪಾಠಾಂತರಗಳು ಟಿಪ್ಪಣಿಯಲ್ಲಿ ಇದ್ದರೆ ಸೌಕರ್ಯವಿಲ್ಲವೆಂದು ತಿಳಿದು ಅಲ್ಲಲ್ಲೆ ಗ್ರಂಥದ ಕೆಳಗೆ ಕೊಟ್ಟಿವೆ. ಶಿಥಿಲಾಕ್ಷರಗಳನ್ನು ತೋರಿಸುವದಕ್ಕೆ ಆ ಅಕ್ಷರಗಳ ಮೇಲೆ (*) ಈ ವಿಧವಾದ ಒಂದು ಹೂ ಹಾಕಿರುತ್ತದೆ.

ಪ್ರಥಮ ಮುದ್ರಣದಲ್ಲಿ ಕಥಾಸಾರವು ಅಸಮಗ್ರವೆಂದು ತಿಳಿದು ಬಂದುದರಿಂದ ಪುನಃ ಬರೆಯಲ್ಪಟ್ಟಿರುತ್ತೆ. ವೃತ್ತಗಳನ್ನೂ ಅವುಗಳ ಲಕ್ಷಣಗಳನ್ನೂ ಆಯಾ ಪದ್ಯಗಳ ಕೆಳಗೆ ಕೊಡುವದಕ್ಕಿಂತ ಕೊನೆಯಲ್ಲಿ ಒಟ್ಟಿಗೆ ಕೊಡುವದು ಉಚಿತವೆಂದು ಕಂಡು ಬಂದುದರಿಂದ ಹಾಗೆ ಮಾಡಿದೆ.

ಟಿಪ್ಪಣಿಯಲ್ಲಿ ಕೊಟ್ಟಿರುವ ಅನುವಾದಗಳಲ್ಲಿ ಅನಾವಶ್ಯಕವಾದ ಭಾಗವನ್ನು ಬಿಟ್ಟು ಆವಶ್ಯಕವಾದವನ್ನಿಟ್ಟಿದೆ. ಟಿಪ್ಪಣವನ್ನು ಎಲ್ಲಿ ಸಾಲದೆಂದು ತೋರಿತೋ ಅಲ್ಲಿ ಹೆಚ್ಚಿಸಿಯೂ, ಎಲ್ಲಿ ಹೆಚ್ಚೆಂದು ತೋರಿತೊ ಅಲ್ಲಿ ಕಡಮೆ ಮಾಡಿಯೂ ಇದೆ.

S. G. N.
M. A. R.

24th June, 1896.

# ಪೀಠಿಕೆ.

## —ಕವಿಚರಿತ್ರೆ—

ಈ ಗ್ರಂಥಕರ್ತನ ಹೆಸರು ಆಂಡಯ್ಯನು. ಈತನು ಆಂಡಯ್ಯನ ಮಕ್ಕಳಾದ ಸಾಂತ, ಗುಮ್ಮಟ, ವೈಜಣರಲ್ಲಿ ಹಿರಿಯನಾದ ಸಾಂತನ ಮಗನು (೧೦) ಈತನ ತಾಯಿ ಬಲ್ಲವ್ವೆ (೧೧) ಈತನು ಜೈನಮತಕ್ಕೆ ಸೇರಿದವನು (೧೩) ಈತನು ತನ್ನ ತಾತನನ್ನು "ಲೆಕ್ಕಿಗರಪಿರಿಯಂ" ಎಂದೂ (೯), ತನ್ನನ್ನು "ಲೆಕ್ಕಿಗರರಸಂ" (೧೧) ಎಂದೂ ಹೇಳಿಕೊಳ್ಳುತ್ತಾನೆ. ಈತನು ಗ್ರಂಥಾಂತದ ಗದ್ಯದಲ್ಲಿ ತನ್ನ ಗುರು, ಬಿರುದು ಮುಂತಾದುವನ್ನು ಹೇಳಿಕೊಂಡಿಲ್ಲ. ಈ ಗ್ರಂಥಾವತರಣದಲ್ಲಿ ಕನ್ನಡನಾಡನ್ನು ವರ್ಣಿಸಿರುವದರಿಂದಲೂ (೧೯), ಗ್ರಂಥಾಂತ್ಯದಲ್ಲಿ ಈ ಗ್ರಂಥವು

"ಗೋಸಣಿ ಮಾಡುವನ್ನವಿದು ರಾಯನ ನಾಲ್ಕಿಳೊಳಿರ್ಕೆ ನಿಚ್ಚಮುಂ" (೩೪೮)

ಎಂದು ಹೇಳುವುದರಿಂದಲೂ, ಕನ್ನಡದೇಶವೇ ಈತನ ದೇಶವಾಗಿರಬಹುದು. ಈ ಕವಿಯು ಕ್ರಿ. ಶ. ೧೦ನೆಯ ಶತಮಾನದಲ್ಲಿದ್ದ ರನ್ನನನ್ನೂ, ೧೨ನೆಯ ಶತಮಾನದಲ್ಲಿದ್ದ ಅಗ್ಗಳನನ್ನೂ, ೧೩ನೆಯ ಶತಮಾನದ ಆದಿಯಲ್ಲಿದ್ದ (ಕೇಶಿರಾಜನ ಮಾವನಾದ) ಜನ್ನನನ್ನೂ (೪) ಹೊಗಳಿರುತ್ತಾನೆ. ಜನ್ನನ ಸಮಕಾಲಿಕನಾದ (ಕೇಶಿರಾಜನ ತಂದೆಯಾದ) ಮಲ್ಲಿಕಾರ್ಜುನನು ತನ್ನ "ಸೂಕ್ತಿಸುಧಾರ್ಣವ"ದಲ್ಲಿ ಈ ಗ್ರಂಥದ ೩೩೭, ೩೩೯, ೩೪೦ನೆಯ ಪದ್ಯಗಳನ್ನು ಉದಾಹರಿಸಿರುತ್ತಾನೆ. ಆದುದರಿಂದ ಈ ಕವಿಯು ೧೩ನೆಯ ಶತಮಾನದ ಆದಿಯಲ್ಲಿದ್ದಿರ ಬಹುದು. ಈ ಕವಿಯಿಂದ ಉದ್ದಾಮಕವಿಗಳ ಗುಂಪಿನಲ್ಲಿ ಸೇರಿಸಲ್ಪಟ್ಟ ಕಣ್ಣಮಯ್ಯನು ಮಲ್ಲಿಕಾರ್ಜುನನಿಗಿಂತ ಆಧುನಿಕನೆಂದು ಮೇ|| ರೈಸರವರು ಹೇಳುವದು ಸರಿಯಾಗಿ ಕಾಣುವದಿಲ್ಲ. ಈತನು ರಚಿಸಿದ ಇತರ ಗ್ರಂಥಗಳೇನೂ ಗೊತ್ತಿಲ್ಲ. ಈತನ ಕವಿತಾಶೈಲಿಯು ಬಹಳ ಸರಳವಾಗಿದೆ. ಈತನು ಪ್ರಯೋಗಿಸುವ ಪದಗಳ ಮೈತ್ರಿಯು ಬಹಳ ರಮಣೀಯವಾಗಿದೆ.

## —ಗ್ರಂಥಪ್ರಶಸ್ತಿ—

ಸಂಸ್ಕೃತ ಸಹಾಯವಿಲ್ಲದೆ ಕನ್ನಡದಲ್ಲಿ ಕಾವ್ಯವನ್ನು ರಚಿಸುವದು ಅಸಾಧ್ಯವೆಂದೂ ಆದುದರಿಂದಲೇ ಪಂಪನೇ ಮೊದಲಾದ ಮಹಾಕವಿಗಳು ಮಿಶ್ರಭಾಷೆಯಲ್ಲಿ ಕಾವ್ಯವನ್ನು ಬರೆದರೆಂದೂ ಕೆಲವರು ಆಕ್ಷೇಪಿಸಿದಂತೆಯೂ, ಅದು ಸಾಧ್ಯವೆಂದು ತೋರಿಸಲು ಈ ಗ್ರಂಥವನ್ನು ಈ ಕವಿಯು ರಚಿಸಿದಂತೆಯೂ ಪ್ರವಾದವಿದೆ. ಅದರಂತೆಯೇ ಈ ಗ್ರಂಥವು ಸಂಸ್ಕೃತಪದಗಳ ಮಿಶ್ರವಿಲ್ಲದೆ ದೇಶ್ಯಪದಗಳಿಂದಲೂ, ತದ್ಭವ ಪದಗಳಿಂದಲೂ ವಿರಚಿತವಾಗಿದೆ. ಈ ಗ್ರಂಥಕ್ಕೆ "ಕಬ್ಬಿಗರಕಾವ" "ಮದನವಿಜಯ," ಕಾವನ ಗೆಲ್ಲ", "ಸೊಬಗಿನ ಸುಗ್ಗಿ" ಎಂಬ ಹೆಸರುಗಳುಂಟು. ಇದರಲ್ಲಿ ಮನ್ಮಥನ ವಿಜಯುವನ್ನು ವರ್ಣಿಸುವದರಿಂದ "ಮದನವಿಜಯ" ಅಥವಾ "ಕಾವನ ಗೆಲ್ಲ" ವೆಂದೂ, ಕವಿಗಳ ಮೇಲೆ ಬಂದ ಅಪವಾದವು ಇದರಿಂದ ಹೋದುದರಿಂದ "ಕಬ್ಬಿಗರಕಾವ" (ಅಂದರೆ ಕವಿಗಳ ರಕ್ಷಕ) ಎಂದೂ, ಬಹಳ ರಮ್ಯವಾಗಿರುವದರಿಂದ "ಸೊಬಗಿನ ಸುಗ್ಗಿ"ಯೆಂದೂ ಹೆಸರು ಬಂದಿರಬಹುದು.

ಉದಯಾದಿತ್ಯಾಲಂಕಾರದಲ್ಲಿ ಹೇಳಿರುವ "ಗದ್ಯದ ಪದ್ಯದ ಮಿಶ್ರದೆ| ಹೃದ್ಯಂ ಚಂಪೂಸಮಾಖ್ಯಕಾವ್ಯಂ"

ಎಂಬ ಲಕ್ಷಣಕ್ಕೆ ಅನುಸಾರವಾಗಿರುವದರಿಂದ, ಇದು ಚಂಪೂಪ್ರಬಂಧ. ಇದರಲ್ಲಿ ಆಶ್ವಾಸ ವಿಭಾಗವಿಲ್ಲ. ಈ ಗ್ರಂಥದ ೩೧ಲನೆಯ ಪದ್ಯವು ಶಬ್ದಾನುಶಾಸನದಲ್ಲಿಯೂ, ೧೪, ೨೨, ೨೪, ೩೫, ४೨, ೯೮ ನೆಯ ಪದ್ಯಗಳು ಅಭಿನವವಾದಿ ವಿದ್ಯಾನಂದನ ಕಾವ್ಯಸಾರದಲ್ಲಿಯೂ ಉದಾಹರಿಸಿವೆ.

# ಶೋಧನಪತ್ರ.

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೭ | ೨ | ತೆಳ್ವಸಿರೊ | ತೆಳ್ವಸಿಱೊ |
| ೨೪ | ೫ | ನುಡಿಯಂ | ನುಡಿಯು |
| ,, | ೨೦ | ಸಗದಾ | ಸಗ್ಗದಾ |
| ೩೧ | ೧೨ | ಗಳೆಂದೊಂಡೆ | ಗಳೆಂದೊಡೆ |
| ೪೩ | ೨ | ಏಱಿಸು | ಏಳಿಸು |
| ೪೭ | ೯ | ,, | ,, |
| ,, | ೧೫ | ಉಱದಱಿಲಿಂ | ಉಱದಳವಿಂ |
| ೫೯ | ೬ | ನರಸುವ | ನಱಸುವ |

## ಟಿಪ್ಪಣಿ.

| | | | |
|---|---|---|---|
| ೬ | ೨೨ | ಎಳೆವ | ೧೨. ಎಳವೆ |
| ,, | ೨೭ | ದಂತ | ದಶ |
| ೧೪ | ೯ | ಭಮರ ಅಡಿರ | ಭ್ರಮರ. ಆರಡಿ |
| ,, | ೧೩ | ಎಱೆಯೆ | ಎರೆಯೆ |
| ,, | ೧೬ | ಮಾಟವನು | ಮಾಡಿದನು |
| ೧೫ | ೧೮ | ಳಾಗಿಲಿಲ್ಲ | ಳಾಗಲಿಲ್ಲ |
| ,, | ೨೩ | ಗಜೇಂದ್ರನ್ಸ | ಗಜೇಂದ್ರನ |
| ,, | ೨೪ | ಕೆಟೆ | ಕಟ್ಟೆ |
| ೨೯ | ೨೧ | ಡಿವಸ | ದಿವಸ |
| ,, | ೨೮ | ಹಸ್ತ | ಹಸ್ತತಳ |
| ೩೨ | ೨೪ | ಗಜಣ | ಗಜಗಣ |

ಮಹಾಕವಿ

ಆಣ್ಡಯ್ಯ ಪ್ರಣೀತಂ

# ಕಬ್ಬಿಗರ ಕಾವಂ.

---

ಆವನ ಗಾಡಿ ನೋಡಿದವರಂ ಸಲೆ ಸೋಲಿಸುತಿರ್ಪುದುರ್ಕಿನಿಂ ।
ದಾವನ ಪೂವಿನಂಬಭಟರಂ ತಲೆವಾಗಿಸುತಿರ್ಪುದೇೞ್ಗೆಯಿಂ ॥
ದಾವನ ಪಜ್ಜಳಿಪ್ಪ ಜಸಮೆಣ್ದೆಸೆಯೊಳ್ ನೆಲಸಿರ್ಪುದಾತನೀ ।
ಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂ ನನೆವಿಲ್ಲಬಲ್ಲಹಂ ॥೧

ಸಿರಿಯುರಸಂ ಮಾದೇವಂ ।
ಸರಸತಿಯೊಱೆಯರ್ಕಳಡಿಗಳೆಂಬೀಕೆಂದಾ ॥
ವರೆಗಳ್ ಪೊರೆಗೆಮ್ಮಂ ಪೊಸ ।
ಸಿರಿಗಂಪಿಂ ಪೞಮೆವೞಿಯನೆಂತಂತೊಲವಿಂ ॥೨

ಗರುವಿಕೆಗಿಂಬು ಗಾಡಿಗೆ ತವರ್ಮನೆ ಮೆಯ್ಮೆಗೆ ಮೇರೆ ನನ್ನಿಗಾ ।
ಗರಮುೞಿತಕ್ಕೆ ಗೊತ್ತು ಪೆಸರ್ವೆತ್ತ ನೆಗೞ್ತೆಗೆ ತಾಣಮಾಗಿ ಬ ॥
ಲ್ಲರ ಬಗೆಯಲ್ಲಿ ಕೂಡಿ ನೆಲಸಿರ್ಪ ಪೊಗೞ್ತೆಯನಾಂತಳಾವಳಾ ।
ಸರಸತಿ ಕೂರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದಿನೇೞ್ಗೆಯಂ ॥

ಎನ್ನೀ ಕಬ್ಬದೊಳೆಂದುಂ ।
ಸನ್ನಿದಮಾಗಿರ್ಕೆ ಕಣ್ಣಮಯ್ಯನ ಕಡುಜಾಣ್ ॥

---

೧. ಸಿರಿಯೊಱೆಯು. ಗ॥ ೨ ಗಳಂತೊಲವಿಂ. ಕ। ೩. ಗಿಂಪು ಗ॥
೪. ನೆಗೞ್ತೆಯು. ಗ॥ ೫. ದೊಲಿದು. ಕ॥ ೬. ಕಣ್ಣಪಯ್ಯಂ. ಖ॥

ರನ್ನನ ಮೆಯ್ಸಿರಿ ಗಜಗನ ।
ಬಿನ್ನಣಮಗ್ಗಳನ ಕಾಣ್ಕೆ ಜನ್ನಿಗನ ಜಸಂ ॥೪

[1]ಒಪ್ಪಂಬೂಸಿದವೋಲ್ ತೆಱಂಬೊಳೆವ ಕೊಂಕುಂ ಪಾಲೊಳೊಂದಿರ್ಪವೋಲ್ ।
ಲೊಪ್ಪಂಬೆತ್ತಿನಿದಾದ ಬರ್ದನುಡಿಯುಂ ತಳ್ತೋಜೆಯುಂ ನಿಲ್ವಿನಂ ॥
ತಪ್ಪೊಂದುಂ ತಲೆದೋಱದಂತೆ ಪಲರೆಲ್ಲರ್ ತಿರ್ದಿದೀ ಕಬ್ಬಮಂ ।
ತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲ್ಗೊಳ್ಳದೇ ? ॥೫

ಪುರುಳುಂ ಲಕ್ಕಣಮುಂ ಮೆ ।
ಯ್ಸಿರಿಯುಂ ತಳ್ತೆಸೆಯೆ ಪೇಳ್ದ ಕಬ್ಬಮದೆಂತುಂ ॥
ಪುರುಳುಂ ಲಕ್ಕಣಮುಂ ಮೆ ।
ಯ್ಸಿರಿಯುಂ ತಳ್ತೆಸೆವ ರನ್ನದಂತೆರ್ದವುಗದೇ ? ॥೬

ಕನ್ನಡದೊಳ್ಪಿನ[2] ನುಡಿಯುಂ ।
ಮುನ್ನಿದಱೊಳ್ ನೋಡಿ ತಿಳಿದು ಕೊಳ್ವುದು ಚದುರಂ ॥
ರನ್ನದ ಕನ್ನಡಿಯುಂ ನಲ ।
ವಿನ್ನೋಡಿದವಂಗೆ ಕುಂದದೇನಾದಪುದೇ ? ॥೭

ಸೊಗಯಿಸುವ ಕಬ್ಬಮಂ ಕ ।
ಬ್ಬಿಗರಲ್ಲದೆ ಮೆಚ್ಚರುೞಿದರೇನಱಿವರೆ ? ತುಂ ॥
ಬಿಗಳಲ್ಲದೆ ಪೂವೊಳ್ ಮಗ ।
ಮಗಿಸುವ ಕಂಪಂ ಕಡಂದುೞೇನಱಿದಪುದೇ ? ॥೮

ಎಱಗುವ[3]ನೆರುಹಂಗುೞಿದ ।
ಗೆಱಗೆಂ ಕನಸಿನೊಳಮೋದನಲ್ಲದೆ ಮೆಚ್ಚಂ ॥
ಮಱಿಮಂ ಪೆಱವೆಣ್ಣೊಳ್ ನೆರೆ ।
ದಱಿಯಂ ಲೆಕ್ಕಿಗರ ಪಿರಿಯನೆನಿಪಾಂಡಯ್ಯಂ ॥೯

೧. ತುಪ್ಪಂ. ಗ॥ ೨. ಬೆಳತಿನ. ಕ॥ ೩. ನಱುವಂ. ಕ॥

ದಿಮ್ಮಿದರಕ್ಕರಕ್ಕಱವರೊಳ್ ನುಡಿಯೊಳ್ ಕಡುಜಾಣರಂದದೊಳ್ ।
ಪೊಮ್ಮಿದರೊಂದಿನಿಂದ ಸಿರಿಯೊಳ್ ಪಿರಿಯರ್ಗೆಡೆಗೊಟ್ಟು ಬಾಳ್ವರಂ ॥
ದುಮ್ಮಳವರ್ಗೆ ಕೇಳ್ ಮುಳಿಯರಾತನ ಮಕ್ಕಳೆನಿಪ್ಪ ಸಾಂತನುಂ ।
ಗುಮ್ಮಟನುಂ ಜಸಂಬಡೆದ ವೈಜಣನುಂ ನೆಱೆ ಮೆಚ್ಚೆ ಮಾನಿಸರ ॥೧೦

ಅವರೊಳ್ ನೋೞ್ಪೊಡೆ ಮೊದಲಿಗ ।
ನಿವನೆನೆ ಗರುವಿಕೆಯನಾಂತ ಸಾಂತಂಗಂ ಚೆ ॥
ಲ್ವವರಿವ ಬಲ್ಲಪ್ಪೆಗಮೊ ।
ಪ್ಪವ ಲೆಕ್ಕಿಗರರಸನೆಗೆಡನೆಸೆವಾಂಡಯ್ಯಂ ॥೧೧

ಎಳವೆಂಡಿರುಟ್ಟ ದುಗುಲಮೆ ।
ತಳೆವುದು ಕಡೆಗಣ್ಣ ಬೆಳಗು ಪೊಸಮೆಯ್ದೊಡವು ॥
ಜ್ಜಳಿಪ ಮೊಗಂ ಕನ್ನಡಿಯೆನೆ ।
ಬಳೆದನಿದೇನೆಂಬ ಸೊಬಗಿನೇಱ್ತರವವನಾ ॥೧೨

ಅರುಹಂತನ ಮೆಲ್ಲಡಿದಾ ।
ವರೆಗಳ್ ಬಗೆಯಲ್ಲಿ ನಿಂದುವೆಂದೊಡೆ ನಲವಿಂ ॥
ಸಿರಿವೆಣ್ಣವನೊಳ್ ನಿಚ್ಚಂ ।
ಬೆರಸಿರ್ದಪಳೆಂಬುದಿಂತಿದೇನಚ್ಚರಿಯೋ ? ॥೧೩

ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ ಕೆಂ ।
ದಳಿರ್ಗಳ ತೊಂಗಲಂತೆ ನಡೆನೋಡುವ ಪೆಂಡಿರ ನೋಟದಂತೆ ಪೂ ।

---

೧. ದುಮ್ಮಳಿಪರ್ಗೆ. ಗ॥ ೨. ಮುಳಿವ. ಗ॥ ೩. ಮೆಚ್ಚರಾರುಮಂ. ಗ॥
೪. ಪವವಿಗ. ಕ॥ ೫. ಚೆ॥ಲ್ವರಿವಪ್ಪಬಲ್ಲನೆ ಕ॥
೬. ಕಳೆವುದು. ಖ।ಗ॥ ೭. ಬೆಳ್ಪು. ಕ॥

ಗಳ ಪೊಸಗಂಪಿನೊಳ್ ಪೊರೆದು ತೀಡುವ ತೆಂಬೆಲರಂತೆ ತೋರ್ಪ ತಿಂ
ಗಳ ಸಿರಿಯಂತೆ ಸೋಲಿಸದೆ ಕಾವನ ಕಬ್ಬಮುದಾರನಾದೊಡಂ ||೧೪

ಸೊಗಯಿಪ ಸಕ್ಕದಂ ಬೆರಸಿವಲ್ಲದೆ ಕನ್ನಡದಲ್ಲಿ ಕಬ್ಬಮಂ |
ಬಗೆಗೊಳೆ ಪೇಳಲಾರನಿತುಂ ಸಲೆ ಮುನ್ನಿನ ಪೆಂಪನಾಳ್ದ ಕ ||
ಬ್ಬಿಗರದು ಮಾತನಾಡಿವಪೊಲಂದವನಾಳ್ದರೆ ಪೇಳ್ದ ಬಲ್ಪ ನೆ |
ಟ್ಟಗೆ ದೊರೆಕೊಂಡ ದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳಂ ||೧೫

ಎಂದು ತಮತಮಗೆ ಬಲ್ಲವ |
ರೆಂದೊಡೆ ನಾನವರ ಬಯಕೆಯಂ ಸಲಿಸುವೆನಿ ||
ನ್ನೆಂದಚ್ಚಗನ್ನಡಂ ಬಿಗಿ |
ವೊಂದಿರೆ ಕಬ್ಬಿಗರ ಕಾವನೊಲವಿಂದೊರೆದೆಂ ||೧೬

ಸಿಂಗರವೇಟ್ಟಿಯಂ ಪಡೆಯೆ ದೇಸೆ ಪೊದಳ್ದರೆ ಕೊಂಕು ತೀವೆ ಬ |
ರ್ದಿಂಗೊಳಗಾವ ಮಾತಮರೆ ಬಲ್ಲವರಾಎನೆ ಚೆಂಪವೊಂದಿ ಡಾ ||
ಳಂ ಗೆಡೆಗೊಂಡು ತೋಱ ನನೆವಿಲ್ಲನ ಬೀರಮನೊಲ್ದು ಪೇಳ್ವೆನಾಂ |
ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ ||

ವ|| ಅದೆಂತೆಂದೊಡೆ :—ಒರ್ಗೊಂದೆಡೆಯ ಬೆಂಚೆಗಳೊಳರೆವಿರಿದ ನೀರ್ವೂಗಳ ಕಂಪಿಂಗೆ ಮಾಣದೆ ಮುಸುಱ ವೊರೆವ ಪೆಣ್ದುಂಬಿಗಳ, ತುಂಬಿಗಳ ಬಡವಿಡಿದು ಬನದೊಳೆಡೆಯಾಡುವ ಸಬರಿಯರ ನಡೆಯನೇಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆಗಳ ಬಳಗಂಗಳ, ಗಳಗಳನೆ ಪಸರಿಸಿ ಪರಿದ ಬಯಲೊಳ್ ಬೆಳೆದ ಬಿಳಿಯ ಕರ್ಬಿನ ಕೋಲ್ಗೆ ಕೊರಲುದ್ದಮಾದೆಳನೀರ ಪೊನಲ, ನಲವಿಂ ಬೆಳೆಗೆಯ್ಗಿಱಗುವ ಪಕ್ಕಿಗಳನಲೆವ ಸೋವ ನಾಡ ಗಾಡಿಕಾರ್ತಿಯರ,

೧. ಸೋಲಿಸುವುದಾತನಕಬ್ಬಮುದಾರ,| ಕಾವ್ಯಸಾರದ ಪಾಠ. ೨. ಲಿರ್ಪುದ. ಗ||
೩. ತಾನ. ಗ|| ೪. ಪೋಪ. ಕ||

ಗಾಡಿಕಾರ್ತಿಯರ ಗಾಣ್ಮೆಗೆ ಸೋಲ್ತು ನಿಲ್ವ ಬಟ್ಟೆಗರ, ಗರಗರಿಕೆವಡೆದೆಳವೆಂಡಿರ ತಂಡದಿಂ ನೆಗೞ್ತೆವಡೆದು; ಪೆರ್ಮಲೂರ್ಗಳ ಪುಂಡಾಡುವಂತಾಗಸಕೆ ನೆಗೆದ ಬಿರ್ದಿವಾಡಂಗಳ, ಗೞಿಪ್ರವರಗಿಳಿಯ ಬಳಗಕ್ಕೆ ತವರ್ಮನೆಯಾದ ಮಾಮರದ ಕೊಂಬುಕೊಂಬಿನೊಳ್ ಬಿಡದೆ ಬಗ್ಗಿಪ ಕೋಗಿಲೆಗಳ, ಚೆಲ್ವನೊಳಕೊಂಡಿರ್ಪುದು. ಅಂತುಮಲ್ಲದೆಯುಂ ॥೧೮

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ ।
ನೆಲನಂ ಮುತ್ತಿನ ಮಾನಿಸರ್ ಪೊಗೞಲೇನಂ ಬಲ್ಲರೆಂಬೊಂದು ಬ ॥
ಲ್ಲುಲಿಯುಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾನಾಡು ಚೆಲ್ವಾಯ್ತು ಮೆ ।
ಲ್ಲಲರಿಂ ಪೂತ ಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ ॥೧೯

ಇವು ಪಳ್ಳಿಗಳಿವು ಪಟ್ಟಣ ।
ಮಿವು ಕೆಱೆಗಳಿವೆಱಗಿ ನಿಂದ ಮುಗಿಲೋಳಿಗಳಿಂ ॥
ತಿವು ಕಾಡಿವು ಪೆಸರ್ವಡೆದೊ* ।
ಪ್ಪುವ ಬನಮೊಂದಱದು ಪೇೞ್ವುದರಿದಾನಾಡೊಳ್ ॥೨೦

ಮಲ್ಲಿಗೆಯಲ್ಲದೆ ಸಂಪಗೆ ।
ಯುಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂದೆಂ ॥
ಗಲ್ಲದೆ ಮಾವಲ್ಲದೆ ಕೌಂ ।
ಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್ ॥೨೧

*ಅಡರ್ದೇಱೆ ಕೋಡಗಂಗಳ್ ।
ಕಡುಪಿಂದೀಡಾಡೆ ಘುೞಿಲನೊಡೆದೆಳಗಾಯಿಂ ॥
ದೆಡೆವಿಡಿಗೊಸರ್ವೆಳನೀರ್ಗಳ್ ।

---

೧. ಪೆರ್ಮಲೂರ್ಗಳೊಳಾಗಸಮಂ ಮುಟ್ಟುವಂತೆ ನೆಗೆದ ನೆಲೆವಾಡಂಗಳ. ಕ॥

೨. ರೆಂದೆಂಬದೊಂ । ದಾಲಿಯುಂ. ಕ॥

*. ಇದು ಕಾವ್ಯಸಾರದ ಪಾಠ. " ದೆಡೆವಿಡಿದಿ ಪೆಳನೀರಿಂ । ಮಡುಗೊಂಡೊಪ್ಪುತ್ತುಮಿರ್ಪುವಲ್ಲಿಯ ಬನಗಳ್ ॥ " ಎಂಬುದು ಕ॥ಗ॥ ಪಾಠವು.

ಮಱುಗೊಂಡೋವುತ್ತುಮಿಪ್ಪುರ್ವಲ್ಲಿಯ ಬನವುಂ ‖೨೨
ಉಱೆ ಕಾಯ್ವ ಬಿಸಿಲೊಳೆಮ್ಮಂ |
ಮಱೆದುಂ ಕೊರಗಿಸದೆ ಪೊರೆದುದೆಂದೊಲವಿಂ ಬಂ ‖
ದೆಱಗುವವೋಲ್ ತನೆಯುಂ ಕಾ |
ಲ್ಗೆಱಗುವ ಕಳವೆಗಳವೆಲ್ಲಿಯುಂ ಸೊಗಯಿಸುಗುಂ ‖೨೩
ನೆಯ್ದಿಲ್ಗೊಳಂಗಳೆಡೆಯೊಳ್ |
ಕಾಯ್ದೋವದೆ ಪೊರ್ವ ಪಲವು ನೀರ್ವಕ್ಕಿಗಳಂ ‖
ದೆಯ್ದುಣ್ಮುವ ಸೋರ್ಪನಿಯೊಳ್ |
ತೊಯ್ದಯ್ಯನೆ ಗಾಳಿ ಕೂಡೆ ತೀಡುತ್ತಿರ್ಕುಂ ‖೨೪

ವ ‖ ಮತ್ತಮಾನಾಡೊಳ್ ಕೀಱೆಂಬುದು ಕುದುರೆಯ ಬಾಯ ಕಬ್ಬಿಣದೊಳ್, ಕವರೆಂಬುದು ಚಪ್ಪರದೊಳ್, ಬಂದಿಯೆಂಬುದು ತೊಡವಿನೊಳ್, ಏಱೆಂಬುದು ನೆಲೆವಾಡದೊಳ್, ಮುಡಿಯೆಂಬುದು ಮರುಗದ ತಾಣದೊಳ್, ನೊಱೆಯೆಂಬುದು ನಂಟರೊಳ್, ಪೊಡೆಯೆಂಬುದು ಬೆಳಗೆಯ್ಯೊಳ್, ಕಱೆಯೆಂಬುದು ತುಱುಗಾರ್ತಿಯರೊಳ್, ಪಿಡಿಯೆಂಬುದು ಪೆಣ್ಣಾನೆಯೊಳಲ್ಲದಿಲ್ಲಂತುಮಲ್ಲದೆಯುಂ ‖೨೫

ಪುದಿದೆಳವಳ್ಳಿಯಿಲ್ಲದ ಮರಂ ಕೊಳನಿಲ್ಲದ ತೋಂಟಮಾವಲಿ |
ಲ್ಲದ ಕೆಱೆ ಗಂಡುಗೋಗಿಲೆಗಳಲ್ಲದ ಬಂದೆಳಮಾವು ಕಾಲ್ಗಳ ‖
ಲ್ಲದ ತೊಱೆ ತುಂಬಿಯಿಲ್ಲದಲರಂಚೆಗಳಲ್ಲದ ಬೆಂಚೆ ಬೇಟಮಿ |
ಲ್ಲದ ಬೆಲೆವೆಣ್ಗಳಿಲ್ಲ ಪೆಸರಿಲ್ಲದ ಮಾನಿಸರಿಲ್ಲದೆಲ್ಲಿಯುಂ ‖೨೬
ತಾವರೆಯ ಮಲ್ಲಿಗೆಯ ಪೊಸ |
ಸೇವಂತಿಯ ಬಿರಿದ ಸಂಪಗೆಯ ತನಿಗಂಪಿಂ ‖

---

೧. ಕಾವಲ್ಗೆ-ಡೆಪಾರ್ವ ಗ||, ತೋಯ್ದೋವದೆ ಪೀರ್ವ. ಕಾವ್ಯಸಾರದ ಪಾಠ.
೨. ದೆಯ್ದುವ ಸೀರ್ಪನಿಪನಿಯೊಳ್. ಕಾವ್ಯಸಾರದ ಪಾಠ.
೩. ದಾವಗಿಲದ. ಖ||. ದಾವಿಯಿಲದ. ಗ||.

ತ್ರಿವಿರ್ಪ್ಪನಱುಂದೆಂದುಂ |
ಪೂವಿನ ಪೊಱಲೆಂಬುದೊಂದು ಪೆಸರೆಸೆದಿರ್ಕುಂ ||೨೩

ತೊಳಗುವ ಕರುಮಾಡಂ ನೋರೆ |
ಬಳಸಿದ ಪೊಂಗೋಂಟೆ ಮೇರೆ ನೆಲೆವನೆ ಸೊಗಯಿ ||
ಪ್ಪೊಳಗಣ ಬೆಟ್ಟುಗಳನೆ ಬಗೆ |
ಗೊಳಿಪುದು ಮುನ್ನೀರ ತೆಱದಿನಾಪೊಱಲೆಂದುಂ ||೨೪

ಬಳಸಿದ ಬಳ್ಳಿಯ ಜೊಂಪಂ |
ಗಳ ಮಿಸುಪೆಳದಳಿರ ಕಾವಣಂಗಳ ಪೊಸವೂ ||
ಗಳನಾಂತ ಮಲ್ಲಿಗೆಯ ಮನೆ |
ಗಳ ಚೆಲ್ವಿಂ ಚೆಲ್ವನಾಂತುದಾಪೊಱಲ ಬನಂ ||೨೫

ವ|| ಮತ್ತಮಲ್ಲಿಯ ಬನಂ ಮುಗಿಲ್ಚೆಯೊಳ್ತವಿಡದೆಡೆಯಾಡಿ ಬೞಲ್ದ ಬಿಜೆಜ್ಜೀವರಿಯರ್ಕಳೞಪಟ್ಟುಗೆದಾಣಮೆಂಬಂತೆಸೆವೆಳನೀರ್ಗಳಂ ಪೊತ್ತಾಗಸ [3] ದೆಡೆಗಡರ್ದ ಚೆಂದೆಂಗಿನ ಮರಂಗಳೊಳಂ, ಎಸಗುವೆಲರಿನೊಡೆದೊಸರ್ದ ಪೊಸವಣ್ಣ ಪಸರದಿನೆಸೆವಸಿಯಕೊಂಬನಿಂಬುಮಾಡಿ ಸುೞಿಸು ಗೞಪುವೆಳಗಿಳಿಯ ಬಳಗಕ್ಕೆ ತವರ್ಮನೆಯಾದಿಮ್ಮಾವಿನ ಪೊದಱೊಳಂ, ಬೞಲ್ದುೞಗುವ ಪಱಮೆವಣ್ಗಳಂ ತುಱುಸೆಱೆವಿಡಿವ ನಱುಗಂಪಿನ ಸೊಂಪುಗಳ್ಗಂಬಾದ ಪೊಂಬಾಳೆಗಳಂ ಬಳ್ಕುವಡಕೆಯ ಸಾಲ್ಗಳೊಳಂ, ಬಯ್ಯನೊಯ್ಯನೆ ರಯ್ಯಮಾಗಿ ಮೆಯ್ಯೞಿಯದುಯ್ಯಲಾಡುವ ಸೊಂದಿಗೋಡಗಂಗಳಿಂದೋರೊರ್ಮೆ ನೆಲಕ್ಕೆ ಜೋಲ್ವ ತಿಂತಿಣಿವಣ್ಣನಾಂತ ಸಣ್ಣಗೊಂಬಿಂದಿಂಬುವಡೆದ ದಾಳಿಂಬಂಗಳೊಳಂ, ಬಂದುಬಂದು ನಟ್ಟನಡುವಗಲೊಳ್ ಕುೞಿಯಾಡುವೆಳವೆಂಡಿರ ಮೆಯ್ಯ ಕುಂಕುಮದಿಂದೊಂದಿದ ಕೆಂದಾವರೆವೂಗಳಂ ತಳೆದು ಸೊಂಪನೊ

೧. ಪಿಂದಂ. ಕ||  ೨. ಪೆಸರ್ಗೆಸೆ. ಕ||  ೩. ಕ್ಕೆ ನೆಗೆವ. ಕ||

ೞಕೊಂಡ ತಾವರೆಗೊಳಂಗಳೊಳಂ, ಬಸಂತಂಗೆ ನೆಲೆವೀಡಾಗಿರ್ದುದಂತು ಮಲ್ಲದೆಯುಂ ||೨೦

ಮೊರೆವೆಳದುಂಬಿಯ ನಲವಿಂ |
ನೆರೆಮಂಚೆಯ ನುಡಿವ ಗಿಳಿಯ ಕಿವಿಗಿನಿದಪ್ಪಂ ||
ತಿರೆ ಕರೆವ ಕೋಗಿಲೆಯ ನು |
ಣ್ಚರದಿಂದಂ ಬಿರಿಯಿಗಳ್ಗೆ ಮಾಡುವುದಬಲಂ ||೨೧

ಕನರ್ಗೊನರೆಲ್ಲಿಯಲ್ಲಿ ಮಿಳಿರ್ದಾಡುವ ನುಣ್ಗಳಿರೆಲ್ಲಿಯಲ್ಲಿ ಬ |
ಲ್ಲನೆಗಳವೆಲ್ಲಿಯಲ್ಲಿ ಪೊರೆದೋಱುವ ಮೊಗ್ಗೆಗಳೆಲ್ಲಿಯಲ್ಲಿ ಚೆ ||
ಲ್ವನಿಪಲರೆಲ್ಲಿಯಲ್ಲಿ ಪಸುರೇಱುವ ಕಾಯ್ಗಳವೆಲ್ಲಿಯಲ್ಲಿ ಪ |
ಣ್ಗನೆಗಳವೆಲ್ಲಿಯಲ್ಲಿಯೆನೆ ಸೊಲಿಸುಗುಂ ಬಿಡದಾವನಂ ಬನಂ ||೨೨

ತಿಳಿದ ಕೊಳಂಗಳೊಳ್ ಸುೞಿಸು ಸ್ಪರ್ಶನಿಯುಂ ಬಿಡದೆತ್ತಿಕೊಂಡು ಪೂ
ಗಳ ಪೊಸಗಂಪಿನೊಳ್ ಪೊರೆದು ತುಂಬಿಗಳಂಚರದಲ್ಲಿ ತಳ್ತು ಕೆಂ ||
ದಳಿರ್ಗಳ ತೋಂಗಲೊಳ್ ತೊಡರ್ದು ಕೂಡುವ ನಲ್ಲರ ನೀಳ್ದ ಸೇದೆಯಂ |
ಸೆಳೆದೆಲರಲ್ಲಿ ತೀಡುವುದು ಮೆಲ್ಲನೆ ಮೆಲ್ಲನೆ ರಯ್ಯಮೆಂಬಿನಂ ||೨೩

ವ|| ಅಂತು ನೋೞ್ಪರ ಬಗೆಯಂ ಬಳ್ಳಿವಿಡಿವ ಬನಮಂ ಬಳಸಿ ಪಿಳಸಮಾವ ಪೊಂಗೋಂಟೆಯಿಂದೊಳಗೆ ||೨೪

ಕಣ್ಗಂಬೊದಿದು ರಾಯಬೀದಿ ಮುಡಿಯಿಂದಂ ಬೀೞ್ವ ಪೂಮಾಲೆಯಿಂ |
ತಣ್ಗಂಪಂ ಸವಿದಲ್ಲಿ ಮಂಗಡಗೆ ಪಾಡುತ್ತಿರ್ಪ ಪೆಣ್ದುಂಬಿಯಿಂ ||
ನುಣ್ಗಾಲುಂಗುರಪೀಯೆ ಮೆಲ್ಲುಲಿಯನೆತ್ತಂ ಬರ್ಪ ಬಲ್ವೆಂಡಿರಿಂ |
ಜಾಣ್ಗಂಬೊಪರವೆಂಡಿರಿಂ ಪೊಗೞ್ವರೊಂದಂ ಕೇಳ್ವ ಕೂರಾಳ್ಗಳಿಂ ||೨೫

---

೧. ಬೆಳಗಾಯ್ಬಲ-ಗಾಯ್ಗಳವೆಲ್ಲಿ ಕ|| ೨. ಮತ್ತನೆಯಾಬನುಗಳೊಳ್. ಕ||
೩. ವಣ್ಗಂಪಂ, ಕಾವ್ಯಸಾರಪಾಠ, ೪. ಪೆರ್ವೆಂಡಿರಿಂ, ಕಾವ್ಯಸಾರಪಾಠ,

ಮುತ್ತುಂ ಪಚ್ಚೆ ವರಲ್ಗಳುಂ ಕುಳಸಮುಂ ಮುಂತಾಗಿ ಕುಂದಿಲ್ಲದೊಂ|
ಬತ್ತುಂ ರನ್ನದ ನುಣ್ಗದಿರ್ ನೆಗೆದು ನೀಳ್ದೊಂದೊಂದಱೊಳ್ ಕೂಡಿ ಮೆ ||
ಯ್ವೆತ್ತಿರ್ದಿಂದಿರವಿಲ್ಲ ಪಾಂಗನೆನಸುಂ ಬಾಂಬಟ್ಟೆಯೊಳ್ ಬೀಱು ಕ |
ಣ್ಗೆತ್ತಂ ಸೋಲಮನೀವ ರನ್ನವಸರಂ ಚೆಲ್ವಾದುದಾಬೀದಿಯೊಳ್|| ೩೬

ತೊಳಗುವ ಪೂಗಳನೆಂದುಂ |
ತಳೆದಿರ್ಪ ಕೊಳಂಗಳೆಂಬ ಸಂಕೆಯನೆನಸುಂ ||
ಬಳೆಯಿಸುತಿರ್ಪುದು ಬೀದಿಗ |
ಳೊಳಗೆಲ್ಲಂ ನೆಗ*ಟ್ದ ಕಂಚುಗಾಱರ ಪಸರಂ || ೩೭

ಮಿಗೆ ಬೆಲೆಯೇಱದ ಪೊಲಿಯ |
ಮುಗರಿಯ ದೋರಿಯದ ಪಱಿಯ ತಳರ್*ವಟ್ಟೆಯ ಕಾ ||
ಡಿಗೆನೀರಿನ ಬಟ್ಟೆಯ ಮೞ |
ಗೆಗಳಂ ಸೋಲಿಪುವು ಸೀರೆವರದರ ಪಸರಂ || ೩೮

ವ|| ಅಲ್ಲಿಂ ಬೞಿಯಮುಣ್ಮಿ ಪೊಣ್ಮುವ ನಱುಗಂಪಿನ ಪಸರದಂತೆ ಪಸರಿಸಿದ ತಂತಮ್ಮ ಕಾವಣಂಗಳ ಮುಂದೆ || ೩೯

ಮುಗಮುಗಿಸುತ್ತುಮಿರ್ಪ ನಱುಸುಯ್ ಪೊಸಪೂಗಳ ಕಂಪನೆತ್ತೆನು|
ಣ್ಮೊಗಮಿರದಚ್ಚದಾವರೆಯ ಮೆಯ್ಸಿರಿಯಂ ಪಿಡಿದೆತ್ತಿ ನೀಳ್ದ ಸೆ||
ಳ್ಪುಗು*ರ್ಗಳ ಬೆಳ್ಪು ಕೇದಗೆಯ ಕುತ್ತೆಸಳೋಳಿಯನೆತ್ತಿ ಸುತ್ತಲುಂ |
ಸೊಗಯಿಸುತಿರ್ಪ ಬಾಸಿಗಮನೆತ್ತುವರಗ್ಗದ ಮಾಲೆಗಾರ್ತಿಯರ್|| ೪೦

ವ|| ಅಂತು ಸೊಬಗಿಂಗೊಳಗಾಗಿ ಪುಲ್ಲವಡಿಗಿತಿಯರ ಪಸರದಿನಂದಂಬಡೆದ ಸೂಳೆಗೇಱಿಯ ಕೆಲದಲ್ಲಿ ||೪೧

ಗಱುವರ ಗೊಟ್ಟಿಗಾಱರ ನೆಗೞ್ತೆಯ ಮಿಂಡರ ಮೇಳಗಾಱರ |
ಕ್ಕರಿಗರ ಸಂದ ಕಬ್ಬಿಗರ ಜೋಡೆಯ ಬಂಡರ ಸಾರ್ದ ನೆತ್ತಗಾ ||

೧. ಬಗೆ. ಕ || ೨. ಪುಲ್ಲಿಯ. ಕ|| ೩. ತಳ. ಗ ||
೪. ಪೊಲ್ಲಿಯ. ಗ || ೫. ಮಳ| ಗೆಗಳಂ. ಕ ||, ಮಗ| ಮೆಗಳಂ. ಗ||

ಱರ ಚದುರಂಗಕಾಱರರೊರೆಗಾಱರ ಬಾಜಿಪ ಬೀಣೆಗಾಱರಾ |
ಗರಮನೆ ಪೆಂಪುಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇಱಿಗಳ್ ||
ಕಡಲೊಡೆಯನಿತ್ತ ರನ್ನದ |
ತೊಡವಂ ತುಡು ಸೌರಿಯಿತ್ತ ಪೊಂಬಟ್ಟೆಯನಿಂ ||
ದುಡು ಸಸಿಯಟ್ಟಿದ ಪೂವಂ |
ಮುಡಿಯೆಂಬೀನುಡಿಯೆ ಸೂಳೆಗೇಱಿಯೊಳೆಲ್ಲಂ ||೪೩

ವ|| ಮತ್ತಮಾಪಟ್ಟಣಮಿಟ್ಟಣಂಬಡೆದು ಮೆಱೆವ ಪೊಂಬೆಸದುಪ್ಪರಿಗೆಯ ಬಿಸವಂದವಾದ ಚುಂಚುಲೋವೆಗಳೊಳಗೆ ಬಳಸಿ ನಲಿದುಲಿವ ಪಾರಿವಂಗಳ ಕೊರಲುಲಿಯೊಳಂ, ಪುಲ್ಲವಡಿಗಿತಿಯರೆತ್ತಿ ಪಿಡಿದ ಮಾಲೆವೂವಿನ ನಱುಗಂಪಿಂಗೆ ಕವ್ವರೆಗೊಂಡು ಮುತ್ತಿ ಮುಸುಱಿ ಮೊರೆವ ಮಱಿದುಂಬಿಗಳಂಚರದೊಳಂ, ಜೂದಿನ ದಿಣ್ಣೆಯೊಳ್ ಜೂದಾಡಿ ಗೆಲ್ದು ಕೈಕೊಂಡ ಪೊನ್ನರಾಸಿಗಳ ವಾರುವಂಗಳ ಪೇರಾನೆಗಳ ತೇರ್ಗಳ ವಂಗಡಮುಂ ತಂಡತಂಡದಿಂ ಬೀಯಂಗೆಯ್ವರಸುಮಕ್ಕಳಮುಂದೋದಿ ಮೆಚ್ಚಂಕೊಳ್ವಕ್ಕರಿಗರಬ್ಬರದೊಳಂ, ಓಲಗದವಸರಮನಱಿದರಮನೆಗೆ ಪೋಪ ಬರ್ಪ ಮನ್ನೆಯರ ಮಾಸಾವಂತರ ಪಸಾಯ್ತರ ಬಱಿಸಲ್ವ ತುಱಿಲಾಳ್ಗಳಡ್ಡಣದೊಳೆಡ್ಡವಾಗೆ ಕೀಲಿಸಿದ ಕಿಱುಗೆಜ್ಜೆಯ ದನಿಗಳೊಳಂ, ನೀರುಣಲೆಂದು ಪೊಱಮಟ್ಟು ಕೆಂದೂಳಿಯನೊಟ್ಟಿ ಕೊಳಲೆಂದು ನಿಂದು ನಿಂದು ನೆಲದ ಸೊವಡನಾರಯ್ದು ಮುಸಗಿ ದೆಸೆದೆಸೆಗೆ ವಿಸಟಂಬರಿದು ಮನ್ನಣೆಯ ಮಾವಂತರುಮನಾರೆಕಾಱರುಮಂ ಮೀಱಿ ಗೆಂಟಱೊಳ್ ನಿಂದು ನೋಡುವ ನುಡಿಗೆ ಗಿಱ್ಱನೆಯ್ದುವ ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ ಇಂದಿರನ ಪೊೞಲ ಸಿರಿಯ ಸಡಗರಮಂ ಪಿಡಿಯುತಿರ್ಪುದು. ಅಂತುಮಲ್ಲದೆಯುಂ ||೪೪

೧. ಜಾದಿನ ದಿಂಟೆ ಖ|| ೨. ಗಳೊಳಂ. ಗ|| ೩. ಪೆಸರಾನೆ. ಖ||
೪. ತಿರುಗೊಲ್ವೆಱ. ಗ|| ೫. ಗೆಂಟನೊಳಗಿರ್ದಕಾಗುವ. ಖ|| ೬. ನೀರೆಯ್ದುವ. ಕ||

ನಲವಿಂದಿರುಳುಂ ಪಗಲುಂ ।
ನೆಲನೆಲ್ಲಂ ಬಾಱುವುದೀತನಾದ ಬೞಿಕ್ಕೆಂ ॥
ದುಲಿಯೆ ಸಲಪುತ್ತುಮಿರ್ಪಂ ।
ತೊಲಗದೆ ನನೆಯುಂಬನೆಂಬನಂತಾಪೊಱಲಂ ॥೪೫

ಜಸಮೆಳೆಯೆಲ್ಲಮಂ ಬಳಸೆ ಬಲ್ಪು ನೆಗೞ್ತೆಯ ಬೀರರಂ ಝಳಂ।
ಪಿಸೆ ಕಡುನನ್ನಿ ಬಂದು ಸರಣೆಂದವರಂ ತಲೆಗಾಯೆ ಚಾಗದೊಂ ॥
ದೆಸಕವಲಂಪಿನಿಂ ಬಡವರಂ ತಣಿಪುತ್ತಿರೆ ತಕ್ಕರೊಲ್ದು ಬ।
ಣ್ಣಿಸೆ ನನೆಯುಂಬನೆಯ್ದೆ ನೆಲನಂ ಬಲದೋಳ್ದಲೆಯಲ್ಲಿ ತಾಳ್ದಿದಂ ॥೪೬

ನುಡಿ ಸಲೆ ನನ್ನಿಗಿರ್ಕೆವನೆಯೂದುದು ಜಾವನದೇೞ್ಗೆ ಕಯ್ಗೆ ಕ।
ನ್ನಡಿಯೆನಿಸಿತ್ತು ಪೆಂಪು ಪಿರಿಯರ್ಗೆಡೆಗೊಟ್ಟುದು ಗಾಡಿ ರೂಡಿಯಂ॥
ಪಡೆದುದು ಬೀರಮುಗ್ಗಡದ ಸ್ಥೈರಣೆಗಾಗರವಾಯ್ತು ನೋೞ್ಪಡೆಂ ।
ದಡಿಗಡಿಗೊಲ್ದು ಬಣ್ಣಿಸುವುದಾನನೆಯುಂಬನ ಪೆರ್ಮೆಯಂ ನೆಲಂ ॥೪೭

ಪಗೆಗಳುಮಂ ಪೆಂಡಿರುಮಂ।
ಮಿಗೆ ಸೋಲಿಪುವವನ ಬೀರಮುಂ ಗಾಡಿಯುಮಾ ॥
ಪಗಮಡಸಿ ತಾಗೆ ಕಣೆಯುಂ।
ಮುಗುಳ್ಗಣೆಯುಂ ಮೊನೆಯೊಳಂ ಪೊಱಲ್ವೀದಿಯೊಳಂ ॥೪೮

ಪಡಿಮೊಗಮಾಗಲೊಡಂ ಕ।
ನ್ನಡಿಯಂ ನೋಡುವರ ತೆಱದೆ ಮೆಯ್ಗುಂದುವರು ॥
ಗ್ಗಡದರಸುಮಕ್ಕಳೆನೆ ಬಾ।
ಳ್ವಡಿದಾರ್ ಬಾೞ್ದಪ್ಪರಾತನಿದಿರೊಳ್ ಪಗೆವರ್॥೪೯

ಕಡುಗಲಿ ನನೆಯುಂಬನ ಬೆ।
ಳ್ಗೊಡೆಯೆತ್ತಿದ ಬೞಿಯ ಮುೞಿದ ರಾಯರ ಕೊಡೆಗಳ್ ॥

೧. ಸಿಲ್ಗೆ. ಕ॥ ೨. ನೋಂಪು. ಕ॥ ೩. ನೊಮ್ಮೆಯುಂ. ಕ॥

ಗಡಣದೊಳ್ ತಳೆದಣಂಬೆಯ ।
ಕೊಡೆವೋಲ್ ಬೆಳ್ಗೊಡೆಗಳಾದುವದನೇವೊಗೞ್ವಂ ॥೫೧

ವ॥ ಮತ್ತಮಾತಂ ತಾವರೆಯಂತೆ ಸಿರಿಯೊಳೊಂದಿಯುಂ ಪೊಡೆಯಲರನೆನಿಸಂ; ಸಿಡಿಲಂತೆ ಕಾಯ್ಪನಾಂತುಂ ಬಿಸುಗದಿರನೆನಿಸಂ; ಬಿಲ್ಗಾಱನ ಕೈಯಂತೆ ಮಿಸುಪ ಸರದಿನಳವಟ್ಟುಂ ಮಾಲೆಗಾಱನೆನಿಸಂ; ಪಾರ್ವರ ಕೇೞಿಯಂತೆ ಚೆಂದಂಬಡೆದ ಮಡದಿನೆಸೆದುಂ ತೇರೆನಿಸಂ; ಬಾನಂತೆ ಮಿಾನ್ಗಳಂ ತಳೆದುಂ ಮುನ್ನೀರೆನಿಸಂ; ಮಾವಿನಂತೆ ಕೋಡುಗ್ಗೆಯೊಂದಿಯ್ಯುಂ ಸೊರ್ಕಾನೆಯೆನಿಸಂ; ಎಂಬ ನೆಗೞ್ತೆಯಂ ಪೆತ್ತು ಪಲವುಂ ಪಗಲರಸುಗೆಯ್ಯುತ್ತುಮಿರ್ಪನ್ನೆಗಂ ॥೫೧

ಬಲವಿಂದೋಲಗಿಸುವೆನೀ ।
ನೆಲದೆಱೆಯನನೆಂದು ಬರ್ಪವೋಲ್ ಬಗ್ಗಿಪ ಕೋ ॥
ಗಿಲೆಯ ತೊದಳ್ನುಡಿ ಬಿರಯಿಯ ।
ನಲೆಯುತ್ತಿರೆ ಬಿಡದೆ ಬಂದುದಂದು ಬಸಂತಂ ॥೫೨

ಬಿರಯಿಗಳಂಜೆ ತಾಱ ಪಗಲ್ಮಾಣನ ಮೆಯ್ ಬಿಸುಪೇಱ ಮಾಗೆ ಚೆಚ್ಚರದೊಳೆ ಪಾಱ ನೀರ್ದೆಗೆದು ಬೆಂಚೆಗಳೊಳ್ ಕೆಸಱಾಱ ತುಂಬಿಗಳ್॥
ಮೊರೆದಲರತ್ತ ಜಾಱ ನನೆಯಂ ತರದಿಂದದಿರ್ಮುತ್ತೆ ಪೇೞ ತಾ ।
ವರೆ ತಲೆದೋಱ ತೀಡಿದುದು ತೆಂಕಣ ಗಾಳಿ ಬಸಂತದೇೞ್ಗೆಯೊಳ್॥೫೩

ವ॥ ಮತ್ತಂ ಕೆಲಬಲದ ಕಿಱುವೆಟ್ಟನೊಳ್ ಪುಟ್ಟಿದ ಬೇವುಬೊಬ್ಬುಲಿಗಳಂ ತನ್ನಂತೆ ಮಾಱ್ಪ ಸಿರಿಕಂಡವೆಟ್ಟನೊಳ್ ಪುಟ್ಟಿಯುಂ, ಸೊಂದಿಗೋಡಗಂಗಳ ಕಾಲಾಟದಿನಲ್ಲೊಕ್ಕಲರಿನುದಿರ್ದ ದೂಳಿಗಳನಮರ್ಚಿಯುಂ, ಕಿಬ್ಬರಿಗಳೊಳ್ ಬೆಳೆದಸುಗೆಯ ಬನಮನಿರ್ಕೆ ಮಾಡಿ ಬಿಡದೂಳ್ವ ಪೆಣ್ಗೋಗಿಲೆಯ ಸರಂಗಳಂ ತೊದಳ್ನುಡಿಯಂ ಬೀಱಯುಂ, ಎಡೆವಿ

೧. ಮೆರೆವಣಂಬೆ. ಗ॥ ೨. ಪುಗಿಲೆ. ಗ॥, ನೀರ್ದೇರೆ. ಖ॥
೩. ರಸೂತನಂ. ಗ॥ ೪. ಸಾರೆ. ಗ॥

ಡದೆ ಕಡಲ ತಡಿಗಳೊಳ್ ಪೊಂಬಾಳೆಯ ಕಂಪು ಪೊಂಪುೞಿವೋಗೆ ನೆಗೆದ ಕೌಂಗಿನ ಸಾಲಸಂದಣಿಯೊಳ್ ನಿಱಿಗಱಿಗಂಪನಾಡಿಯುಂ, ಪಟ್ಟಣಂಗಳ ಪೊಱವೊೞಲ ತೋಂಟಂಗಳೊಳ್ ಬೇಱೂರ್ಗೆ ಪೋದ ನಲ್ಲರ ನೆನೆದು ದೂಱಿಸುವ ನೀಱೆಯರ ನಿಡುಸುಯ್ಯ ಗಡಣದಿಂ ಜೌವನವೇಱಿಯುಂ, ಸೊಬಗುಮಂ ಗಾಡಿಯುಮನೊಳಕೊಂಡು ತಿರುಗುವೆಳವೆಂಡಿರ ಬಟ್ಟಮೊಲೆಯಿಟ್ಟೆಡೆಯೊಳವೊಕ್ಕ ತೋರಮುತ್ತಿನಾರಮನಲ್ಲಾಡಿಯುಂ, ಕಱವೆಯ ಮಡಿಗಳ ಬಱಿವಿಡಿದು ಬೆಳೆದ ಚೆಂಗಣಿಗಿಲೆಯ ಕಂಪಿನೊಳ್ ಪೊರೆದು ಪರಿವ ತೊಱೆಗಾಲ್ಗಳ ಸೀರ್ಪನಿಗಳನೀಂಟಿಯುಂ, ಇಂತು ಪಾಱುಬೊಜಂಗನ ಗೆಯ್ತಮನೊಳಕೊಂಡು ತೀಡೆ ॥೫೪

ಕಡುಸೊರ್ಕಿಂದಲರಂಬನಾನೆಯೆನಿಪೀತೆಂಗಾಳಿ ತನ್ನಿಚ್ಚೆಯಿಂ ।
ನಡೆತಂದಪ್ಪುದು ಬೇಗದಿಂ ಬಿರಯಿ ನೀಂ ಪೋ ಪೋಗು ಪೋಗೆಂದು
ಮುಂ ॥ ಗಡೆಯೊಳ್ ಸಾಱುವ ಡೌಡೆಯೆಂಬ ತೆಱದಿಂದಂ ಬಗ್ಗಿಸುತ್ತಿ
ರ್ದುವು । ಗ್ಗಡದಿಂ ಕೋಗಿಲೆ ಮೊಗ್ಗೆಯಿಂ ಮಿಡಿಗಳಂ ಸೊಂಪೇಱಿದಿ
ಮ್ಮಾವಿನೊಳ್ ॥೫೫

ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ ।
ಪಲವು ಬಸಂತನೊಲ್ದೊಲಿಸಿ ಕಾಡುವ ರೂಡಿಯ ಬರ್ದುವೆಂಡಿರಂ ॥
ನೀಲಿ ಸೆಱಗೆಯ್ವೆನೆಂದು ಪಲವಾಗಿರೆ ಮಾಡಿದ ತನ್ನ ಬಳ್ಳಿಸಂ ।
ಕಲೆಗಳವೆಂಬಿನಂ ಬಗೆಯನಿರ್ಕುಳಗೊಂಡುವದೊಂದು ತಾಣದೊಳ್ ॥

ಇವಱ ತನಿಗಂಪನಾಂ ಸವಿ ।
ವೆವೆನುತ್ತೆಸೆವಲರ್ಗೆ* ಕಾಪನಿತ್ತುಱೆ ಕೈಕೊಂ ॥
ಡವೊಲೆಱಗಿ ಪಱಮೆವಱಿವಿಂ ।

೧ಗ೨ಡಿ. ಗ॥ ೨. ಗಲಿ. ಗ॥

ಡವಿದತ್ತದಿರ್ಮು*ತ್ತೆಯಲ್ಲಿ ಸಂದಣಿಗೊಳುತುಂ ॥೫೭
ಬಗೆಯದೆ ನಡೆವಳಗರಸಂ ।
ಪಗೆಯುರಮನೆಗೆಯ್ದು ಬಱಿಕ ಜಾಱುವವೊಲ್ ಸಂ ॥
ಪಗೆಯು ನನೆಗೆಯ್ದು ಬಱಿಕೊ ।
ಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯುಂ ॥೫೮
ಕಡು ನಿಮಿರ್ದ* ಕೊಂಬುಕೊಂಬಿನೊ ।
ಳೆಡೆವಿಡದಲರ್*ದಲರ ತೊಂಗಲಿಂ ಪುದಿದುಮಣಂ ॥
ಗಡಣದಿನೆಯ್ತಂದೆಱಪಾ ।
ಱಿಡಿಗಾರಡಿದಾಣಮಾಯ್ತು ಸಂಪಗೆ ಪಲವುಂ ॥೫೯
ಕಾಲ್ಸಮನಿಸೆ ಪೊಸಬಂಡಿನ ।
ಮೆಲ್ಸರಿಯಂ ಸುರಿಯುತಿರ್ಪ ಸಂಪಗೆವೂಗಳ್ ॥
ಬಲ್ಸೆಱೆವಿಡಿವಂತಿರ್ದುವು ।
ಮೆಲ್ಸರದಿಂ ಪಾಡುತಿರ್ಪ ಪೆಣ್ದುಂಬಿಗಳಂ ॥೬೦

ಕನಗೊ*ನರಂ ಕರ್ದುಂ*ಕಿ ದನಿದೋಱುವ ಕೋಗಿಲೆ ಮೇಳದಾಳ್ಗಳಂ। ದೆನೆ ಗಿಳಿವಿಂಡು ಬಂದೆಱೆಯೆ ಬರ್ಪವರೆಂದೆನೆ ಪೊಣ್ಮುತಿರ್ಪ ಪೂ॥ ವಿನ ಪೊಸಗಂಪು ಕತ್ತುರಿಯ ಕಂಪೆನೆ ಪಾಡುವ ತುಂಬಿ ಗಾಣರೆಂ। ದೆನೆ ನನೆಯಂಬನೋಲಗದ ಸಾಲೆವೊಲಿರ್ದುವು ಬಂದಮಾವುಗಳ್ ॥ ೬೧

ನನೆಯಂ [1]ಪೇಱಿದ ತೋರಗೊಂಬು ನನೆಯಂ ಪೂಗೊಂಚಲಂ ಪೊತ್ತುನೆ । ಟ್ಟನೆ ಬೆಳ್ಪೇಱಿದ ಬಳ್ಳಿಗೊಂಬು ನನೆಯಂ ಪೂಗೊಂಚಲಂ ಕಾಯನಂ॥ ತೆನಸುಂ ತಾಳ್ದಿದ ಗುಜ್ಜುಗೊಂಬು ನನೆಯಂ ಪೂಗೊಂಚಲಂ ಕಾಯ್ಗಳಂ । ತನಿವಣ್ಣಂ ತಳೆದಳ್ಳೆಗೊಂಬುತರದಿಂ ಚೆಲ್ವಾದುದಿಮ್ಮಾವಿನೊಳ್ ॥೬೨

ಮಲ್ಲಿಗೆ[3]ಯಲ್ಲಿ ತುಂಬಿ ಮೊರೆಯುತ್ತಿದೆ ಕಂಪಿನೊಳೊಂದಿ ತೆಂಕಣಂ ।

೧. ಪೊತ್ತಿಹ. ಗ॥ ೨. ಬಿಳ್ಪೇ. ಗ॥

ಮೆಲ್ಲನೆ ಗಾಳಿ ತೀಡುತಿದೆ ಕೋಗಿಲೆಗಳ್ ಪೊಸಮಾವುರಂಗಳೊಳ್॥
ಬಲ್ಲುಲಿಯಿಂದೆ ಬಗ್ಗಿಸುತುಮಿಂತಿದೆ ಬಂದುದು ಸುಗ್ಗಿ ತಳ್ವದಂ।
ನಲ್ಲನೆನುತ್ತದೊರ್ವಳೆಳವೆಣ್ ಸುರಿದಳ್ ಮಿಗೆ ಕಣ್ಣನೀರ್ಗಳಂ॥೬೩

ವ॥ ಮತ್ತೊರ್ವಳ್ ಚೆನ್ನೆ ಪೊನ್ನ ಕರುಮಾಡಮಂ ಬಳಸಿ ಬೆಳೆದ ಪೂದೋಂಟಮಂ ಪೊಕ್ಕು ಮೆಯ್ಗರೆದ ನಲ್ಲನಂ ನೆವದಿನಿಂತೆಂದಳದೆಂತೆನೆ॥

ಎಲೆ ತಣ್ಗಾಳಿಯೆ ನೀನೇ।
ಕಲೆದಪೆ ಮಱಿದುಂಬಿಯೇಕೆ ಪಲ್ಮೊರೆದಪೆ ಕೋ॥
ಗಿಲೆಯೇಕೆ ಕಿನಿಸಿದಪೆ ಕಾ।
ದಲನಿಲ್ಲದ ಪೆಱಗೆ ನೋಯಿಪರೆ ನೀವೆನ್ನಂ॥೬೫

ವ॥ ಎಂಬ ಮಾತಂ ಕೇಳ್ದು ತಲ್ಲಣದಿನವಳ ನಲ್ಲನಲ್ಲಿಗೆ ಪೋಗಿ ಮೇಳದ ಕೆಳದಿ ಮೆಲ್ಲನಿಂತೆಂದಳ್॥೬೬

ಕೂಡೆ ಮುಗುಳ್ತ ಮಲ್ಲಿಗೆಗೆ ತೀಡುವ ಗಾಳಿಗೆ ತಂಡತಂಡದಿಂ।
ಪಾಡುವ ತುಂಬಿಗಳ್ಗೆ ಸುಱಿವಂಚೆಗೆ ಕೋಡುವ ಪೂಗೊಳಕ್ಕೆ ಮಾ॥
ತಾಡುವ ಪಕ್ಕಿಗಳ್ಗೆ ದನಿದೋಱುವ ಕೊಂಚೆಗೆ ಸಣ್ಣಗಾಯ್ಗಳಂ।
ಮೂಡುವ ಮಾಮರಕ್ಕಗಿವಳಾಕೆಯೊಳೀಮುನಿಸೇಕೆ ಸಾಲದೇ?॥೬೭

ವ॥ ಮತ್ತಮೊಂದೆಡೆಯೊಳ್॥೬೮

ತರದಿಂದುಣ್ಮುವ ಕಣ್ಣನೀರ್ವನಿಗಳಂ ಕೈಕೊಂಡು ನುಣ್ಮುತ್ತಿನೊ।
ಳ್ಸರಮಂ ಪೆರ್ಮೊಲೆ ಚುನ್ನವಾಡೆ ಸೆಳೆಮಾವಂ ನೆಮ್ಮಿ ಪೂಗಂಪಿನೊಳ್॥ ಪೊರೆದಲ್ಲಾಡುವ ತುಂಬಿವಾಡನೊಲವಿಂ ಕೇಳ್ವಂದದಿಂ ನಿಂದು
ಪಾ। ದರಿಗಂ ನಿಲ್ಲದೆ ಪೋದುದರ್ಕೆ ಬಗೆಗೆಟ್ಟೊರ್ವಾಕೆ ಕಣ್ಮೊಗ್ಗಿಪ್ಪಿದಳ್॥

ವ॥ ಅದಲ್ಲದೆಯುಂ, ಮತ್ತಮೊರ್ವ ಗಾಡಿಕಾತಿ ಸಂದಣಿಸಿ ಚೆಂದಂಬಡೆದ ಕೆಂದಳಿರ ಪಂದರಮಂ ಮೆಯ್ವೆಂಕೆಗಂಜಿ ಪತ್ತೆಸಾರ್ದಿಂತೆಂದಳ್॥೭೦

ಎಲೆ ತೀಡುವ ತೆಂಗಾಳಿಯೆ ।
ನಲವಿಂ ಕಾಲ್ವಿಡಿದು ತಿಳುಪಿ ತಳ್ವಲ್ಲದೆ ಕಾ ॥
ದಲನಂ ತಂದೊಡೆ ನಱುಸು ।
ಯ್ಯಲರಿಂದಂ ನಿನ್ನನಾಗಳುಂ ನೆಱೆ ಪೊರೆವೆಂ ॥ ೨೧

ವ॥ ಅಂತು ಬಂದ ಬಸಂತದೊಳೊರ್ವ ನನೆಯಂಬಂ ತನ್ನ ಮೋ ಳದ ಕಳೆಯನಪ್ಪ ನಗೆಗಾಱನಂ ಬಱಿಯಟ್ಟ ಬರಿಸಿ ಪಸಾಯ್ತರೆಲ್ಲರುಂ ಬಗೆಯಱಿದಿಟ್ಟೆಡೆಯುಂ ತೊಲಗಿ ಪೋಗೆ, ಕೆಲಕ್ಕೆ ಕರೆದು ಕನಸಂ ಕೇ ಳ್ವುದೆಂದಿಂತೆಂದಂ ॥ ೨೨

ತಳತಳಿಸಿ ಬೆಳಪ ತಿಂಗಳ ।
ಬೆಳಗಂ ಕವರ್ವಂತೆ* ಮೆಱೆವ ಮೆಯ್ವೆಳಗಿಂ ಕ ॥
ಣ್ಗೊಳಪೊರ್ವಳನಾನಿಂದಿನ ।
ಬೆಳಗಪ್ಪೊಂದೆರಡು ಗಳಿಗೆಯಾಗಲ್ ಕಂಡೆಂ ॥ ೨೩

ಮಿನುಗುವ ನಿಟ್ಟೆಸಳೊಳ್ ನೀ ।
ರ್ವನಿಗಳನೊಳಕೊಂಡು ತೋರ್ಪ ಕೆಂದಾವರೆಯುಂ ॥
ನೆನೆಯಿಸಿದುದು ಕಾಲುಗುರ್ಗ*ಳ ।
ನೆನಸುಂ ಕಣ್ಗೊಳಿಪ ನಿಡಿಯುಮೆಲ್ಲಡಿಯುವಳಾ ॥ ೨೪

ನೇರಿತೆಳವಾೞೆಗಂಬಮು ।
ನೋರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ ॥
ಬಾರಿಸಿ ಸೊಬಗಿಂಗೆತ್ತಿದ ।
ತೋರಣಗಂಬಂಬೊಲಿರ್ದುವಾಕೆಯ ತೊಡೆಗಳ್ ॥ ೨೫

ಮಿಱುಪ ಸುಱುವಡೆದ ಸಿಂಗರ ।
ದೊೞೆಯೊಳ್ ತಲೆದೋರ್ಪ ತೆರೆಗಳೆಂದೆಂಬಿನಮೇಂ ॥

ಮೆಱೆದುಪ್ಪ ಪೊರ್ಕುೞ ಗಾಡಿಯೊ ।
ಳೞ್ಪುದ ತೆಳ್ಪಿನೊಳೆಸೆವ ತಿವಳಿಗಳವಳಾ [illegible] ॥
ಮಿಳಿರ್ದಾಡುವ ಮಱಿದುಂಬಿಯ ।
ನೊಳಕೊಂಡಸದಳ ತಾವರೆಯನಪ್ಪೊಲ್ ಪೊಳೆವಂ ॥
ತಳೆದು ಕುರುಳ್ಗೞ್ಗಳಿಂ ಬಗೆ ।
ಗೊಳಿಸುವುದೊರ್ರಂತೆ ಮಿಸುಪ ನಗೆಮೊಗಮವಳಾ ॥ ೨೭

ವ॥ ಮತ್ತಮವಳ ಪುಲ್ಲಡಿಪೊದಲ್ಗೊಂಡು ಮೆಲ್ಲಮೆಲ್ಲನೆ ಮೇಗಡರ್ದ ನೀಳ್ದ ಕಣ್ಗಳುಂ ಸೊನಡುವಿನಲ್ಲಾಟಮುಂ ಕಂಡು ಪೊಱಮಾಱಂದೇಱಲಾರ್ತುದಿಲ್ಲ, ಅವಳ ಕಡುಗುಪ್ಪೆನಾಳ್ದ ಪೊರ್ಕುೞೊಳಗಲ್ದ ಬಗೆ ಎಸ್ಟಂ ತೆಗೆಯಿಮೆಂದೆತ್ತಿದ ಕೈಯುಂತಿರ್ದ ಬಾಸೆಯೊಳಂಟುಗೊಂಡ ಕಣ್ ತಿವಳಿಯೊಳಂ ಸಿಲ್ಕಿ ಪೋಗಲಾರ್ತುದಿಲ್ಲ; ಅವಳ ಬೆಟ್ಟತಪ್ಪ ಬಟ್ಟಮೊಲೆಯಿಟ್ಟೆಡೆಯೊಳ್ ತೊಟ್ಟನೆ ಸಿಲ್ಕಿದ ಕಣ್ ಕಪ್ಪಿನೊಳ್ ಕೆಡದ ಮಱಿವುಲ್ಲೆಯಂತೆ ಮಿಡುಕಲಾರ್ತುದಿಲ್ಲ; ಅವಳ ನಗೆಮೊಗದೊಳ್ ಒಪ್ಪುನೊಪ್ಪುನಱಗಿದ ಕಣ್ ಎಸೆವ ಪೊಸದಾವರೆಗೆಱಕದಿಂದೆಱಗಿದ ಮಱಿದುಂಬಿಯಂತೆ ಪೆಱಂಗಲಾರ್ತುದಿಲ್ಲ; ಅವಳ ಪಣೆನೊಸಲನಲೆವ ಬಳ್ಳಿಗುರುಳ್ಗಳೊಳ್ ತೊಡಂಕಿದ ಕಣ್ ಕಣ್ಣಿವಲೆಯೊಳ್ ಕೆಡೆದೆಂಲೆಯಂತಡಿಯಿಡಲಾರ್ತುದಿಲ್ಲ; ಅಂತುಮಲ್ಲದೆಯುಂ॥ ೨೮

ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ।
ಪೊಳೆವಲರ್ಗಣ್ಣ ನುಣ್ಗದಿರ್ಗಳಿಂ ತಿಸರಂಗಳ ನೀಳ್ದ ಡಾಳದಿಂ ॥
ಬಳೆದೆಸೆದಿರ್ಪ ಸೆಳ್ಳುಗುರ ಮೆಯ್ವೆಳಪಿಂ ಮಿಗೆ ಪೆರ್ಮೆವೆತ್ತು ಕ।
ಣ್ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ ॥ ೨೯

೧. ಬಗೆಯನೆನ್ನಂತೆ ಗೆಯ್ವೆಮೆಂದೆತ್ತಿದ ಕೈಯಂ. ಗ॥

ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಮಿಗೆ ಪೆರ್ಮೆವೆತ್ತು ಕ|
ಣ್ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯಂತಿರೆ ಜೊನ್ನದೊಂದು ಪು ||
ತ್ತಱಿಯುವೊಲೊಪ್ಪವೆತ್ತ ಬಿದುಗಲ್ಲಿನ ಬೊಂಬೆಯ ಪಾಂಗಿನಂತೆ ಸೊಂ|
ಪಳವಡೆ ಬಂದುದಂ ಕನಸಿನೊಳ್[1] ನೆಱೆನೋಡಿದೆನೆಂದು ಪೂಸರಂ|೮೦

ವ|| ಇಂತು ಕೇಳೆ[2] ಪೇೞ್ವುದುಂ ಮೆಲ್ಲನೆ ನಗೆಗಾಱನಿಂತೆಂದಂ ||೮೧

ಕನಸಿದು ನನ್ನಿ ಕೇಳ್ ನಿನಗೆ ಬೇಗದೆ ಸಾರ್ವಳದೊರ್ವ ಚೆನ್ನೆಯೆಂ|
ದೆನೆ ನನೆಯಂಬನುಟ್ಟ ತಳಿರ್ನಟ್ಟೆಯುಮಾಗಳ್ ಮೆಚ್ಚುಗೊಟ್ಟು ಮೆ||
ಲ್ಲನೆ ನಡೆತಂದು ಪೊನ್ನ ಕರುಮಾಡದ ಮೇಲ್ನೆಲೆಯಲ್ಲಿ ಗಾಡಿಯಿಂ|
ಬೆನೆ ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪನಂ||೮೨

ವ|| ಅಂತೋಲಗಂಗೊಟ್ಟು ಕುಳ್ಳಿರ್ದ ಬಿತ್ತಿಯೊಳಂದಂಬಡೆ[3]ವಂತು ಬಚ್ಚಿಸಿದ ಬಣ್ಣಂಗಳಂ ಬೇಱೆವೇಱೆ ನೋಡಿ ಮೆಚ್ಚುತಿರ್ಪಾಗಳ್; ನಗೆಗಾಱಂ ಬಿನ್ನಪಮೊಂದಿಂತೆಂದಂ ||೮೩

ಬರೆದ ಬನಮಿರ್ಕೆ ನೋಡೀ|
ಕರುಮಾಡದ ಕೆಲದೆ ಬೆಳೆದ ಪೂದೋಂಟಮುಸಿಂ ||
ಚರದಿಂ ಬಗೆಗೊಳಪಂಚೆಯು |
ನೆರವಿಗಳಂ ನೋಡು ತಳೆದು ಪೇಟಂಗಳುಮಂ ||೮೪

ಮಾವಿನ ಜೊಂಪಮುಂ ಮಿಸುಪ ಸಂಪಗೆಯುಂ ಬಗೆಗೊಳ್ವ ಜಾದಿ
ಯುಂ | ಪೂವಿನ ಗೊಂಚಲಿಂ ಪುದಿದ ಪಾದರಿಯುಂ ಪರಿತರ್ಪ ತುಂಬಿ
ಯುಂ || ತಾವರೆಗಿರ್ಕೆಯಾದ ಕೊಳನಂ ನೆರೆದಾಡುವ ಜಕ್ಕವಕ್ಕಿಯುಂ |
ತೀವಿದ ಬಂಡು ಬಂದು[4] ನೆರೆ[5]ಯುತ್ತಿರೆ ಮೆಲ್ಲನೆ ಬರ್ಪ ಕಾಲ್ಗಳಂ ||೮೫

ವ|| ಎಂದು ಬಿನ್ನವಿಸುತ್ತಿರೆ ||೮೬

---

೧. ತಾಂ ಕನಸಿನೊಳ್ನೆರೆನೋಡುತವೊಂದು. ಗ||   ೨. ಪೇಳೆ ಕೇಳ್ವುದುಂ. ಕ|| ಖ||
೩. ಬಡೆದು ಪಚ್ಚಳಿಸಿದ. ನ||   ೪. ಬುಂಡು. ಗ||, ಬಿಂದು. ಕ||   ೫. ನಗೆ. ಕ||

ಬಸದೆಡೆಯಂ ನೋಡುವುದೆಂ ।
ದೆನಸುಂ ತುಂಬಿಗಳ ದನಿಗಳಿಂ ಕರೆವವೊಲೊ ॥
ಯ್ಯನೆ ಬಂದು ಬಂದು ನಾಪೞ್ ।
ಯನ ಕೆಲದೊಳ್ ತೀಡಿದತ್ತು ತೆಂಬೆಲರಾಗಳ್ ॥೮೩॥

ವ॥ ಅಂತು ಬಂದ ತೆಂಗಾಳಿಗೆ ಪಿಡಿದ ಕೆಂದಾವರೆಯ ಮುಡಿದ ಮಲ್ಲಿಗೆಯ ಪೂಸಿದ ಸಿರಿಕಂಡದ ಕಪ್ಪುರದ ತಂಬುಲದ ನೊಸಲ ಕತ್ತುರಿಯ ಕಂಪಂ ಮೆಚ್ಚುಗುಡುವಂತೆ ಮೆಲ್ಲನೆ ಮೆಯ್ವಾರ್ಚಿ ಬೞಿಯಂ ಬನಮಂ ನೋಡಲ್ವೇೞ್ಕುಮೆಂದು ನನೆಯಂಬಂ ಬಗೆಯೊಳ್ ನನೆಯುತ್ತಿರ್ದನ್ನಗಂ ॥೮೪॥

ತೊಂಗಲ್ಗೊಂಡಿರ್ದ ಕೆಂಪಾವಸುಗೆಯ ತಳಿರಂ ಕಂಪುದೀವಿರ್ದ ಪೂವಂ । ಮಾಂಗಾಯಂ ಪೊಚ್ಚಪೊಂಬಾಳೆಯ ಮರುಗಮನಿಂಬಾದ ನಲ್ವಾೞವಣ್ಣಂ ॥ ಪೊಂಗಿರ್ದಾಸ್ಸೈದಿಲೊಳ್ದಾವರೆಯ ಮುಗುಳ್ಗಳಂ ಸೊಂಪಿನಿಂ ಬೆಳ್ಪುವೆತ್ತಿ । ರ್ದಾಂಗೋೞಲಂ ಪತ್ತಿ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟನೊರ್ವಂ ॥೮೫॥

ವ॥ ಅಂತು ಕಾಣ್ಕೆಗೊಟ್ಟವದರಿಪುದೆಂದಿಂತೆಂದಂ:— ಪೆಱನಾಡೆಱೆಯಂ ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆಯುವನ ಮೆಯ್ಗಂದಿದ ಚೆನ್ನ ಪಾಂಗಿನಂತೆ ಪೊಡಪುರ್ಡುಗಿದ ಜಾದಿಯಂ ನಗುವಂದದಿನರಲ್ದ ಸುರಹೊನ್ನೆಗಳೊಳಂ, ಚಲದಿಂ ಮಲೆವ ಮಱುವರಸರ ಪೊಸನೆತ್ತರೊಳ್ ಪೊರೆದ ನಿನ್ನ ಬಾಳಂತೆ ಬಳ್ಪುವಡೆದ ಕೆಂದಳಿರ್ಗಳಿಂ ಮಿಸುಗುವ ಅಸುಗೆಗಳೊಳಂ, ನಿನ್ನ ಮುಳಿಸಿನ ಬೆಂಕೆಯಿಂ ಪೊತ್ತಿ ಪೊಗೆದುರಿವ ಪಗೆವರ ಬೀಡಿನಂತೆ ಸುತ್ತಲುಂ ಪೂತ ಮುಳ್ಮುೞ್ತಗದ ಮರಂಗಳೊಳಂ, ನಿನ್ನಡಿಯಂ ನೆರವಿಲ್ಲದೆ ನಂಬಿದೆವೆಂಬರಸರ ಚೆನ್ನ ಪೊನ್ನ ನೆಲೆವಾಡದಂತೆ

ಪೂಸರಂಬಡೆದ ಕೊಸಗಿನ ಮರಂಗಳೊಳಂ, ನಿನ್ನ ಗಾಡಿಯಂ ನೋಡಿ ಕೂಡಲ್ಪಡೆಯದ ಮಡದಿಯರ ಕದಂಪಿನಂತೆ ತುಱುಗಿದಲರಿಂ ಬೆಳ್ಪೇಱಿದ ಬಕುಳಂಗಳೊಳಂ, ಬಿಸದಕ್ಕೆ ಪಕ್ಕಾದ ಬನಮಂ ನೋಡಲ್ವೇೞ್ಪುದೇೞೆಂದೆಂಬುದುಮಾತಂಗೆ ಮೆಚ್ಚುಗೊಟ್ಟು ‖೧೮‖

ಜಡಿವ ಪಡಿಯಱರ ಸೂಗಯಿಪ ।
ನುಡಿಕಾಱರ ಮೇಳದರಸುಗಳ ಮೆಲ್ಲನೆ ಕೈ ‖
ಗುಡುವ ಸೊಬಗೆಯರ ನೆರವಿಗ ।
ಳೊಡನೆಯ್ದಂ ಬನಮನೊಸೆದು ನೋೞ್ಪುಜ್ಜುಗದಿಂ ‖೧೯

ಬೀಸುವ ಚೆನ್ನ ಸೀಗುರಿಗಳಕ್ಕೆಲದೊಳ್ ಪೊಳೆದಿರ್ಪ ನಾಡೆಯುಂ ।
ಗೋಸಣೆವೆತ್ತ ರಾಯುರಿದಿರೇೞ್ತರೆ ತುಂಬಿಗಳಚ್ಚವೂಗಳಂ ‖
ದೂಸರಮಾದ ಚೊಲ್ಲೆಯದ ಕಂಪಿನೊಳೋಳಿಯಾದ ಸಿಂಗರಂ ।
ದೇಸೆಯೊಳೊಂದಿ ತೋಱೆ ತಳರ್ದಂ ನನೆಯಂಬನದೊಂದು ಚೆಲ್ವಿನಿಂ ‖

ನಡೆಗಳೊಳಂಚೆ ನುಣ್ಗುರುಳೊಳಾಱಡಿ ತೋಳ್ಗಳೊಳಳ್ಳಿಗೊಂಬು ಸೋ । ರ್ಮುಡಿಗಳೊಳ್ಪೆದೆ ಸೋಗೆ ಮಿಗೆ ಸಿರ್ಮೊಲೆಯೊಳ್ ಪೊಣರ್ವಕ್ಕಿ ನಿಚ್ಚಮುಂ ‖ ಕಡುಮುಳಿಯುತ್ತುಮಿರ್ಪುವಿದಱೊಳ್ ದೊರೆಕೊಂಡುವೆನುತ್ತೆ ಕಾಯ್ದು ದಾ । ೞಿಡುವವೊಲಾಬನಕ್ಕೆ ನಡೆತಂದುದು ಪೆಂಡಿರ ತಂಡಮೊಗ್ಗಿಯಿಂ ‖೨೦

ಕಡೆಗಣ್ಗಳ್ ಕುಡಿಮಿಂಚನೀಯೆ ಸುಲಿಪಲ್ ಬೆಳ್ದಿಂಗಳಂ ಬೀಱೆ ಕೇ । ಸಡಿ ಕೆಂದಾವರೆವೂಗಳಂ ಕಡೆ ಪುರ್ಬಿಂಗೋಲವಿಲ್ಗಂದಮಂ ‖ ಕುಡೆ ತೋಳ್ ನೀಳ್ದೆಳಗೊಂಬಿನೊಳ್ ತೊಡರೆ ಗಲ್ಲಂ ನುಣ್ಪು ಕೈಮಿಕ್ಕು ಕ । ನ್ನಡಿಯಂ ಪೋಲ್ತಿರೆ ಬಂದರಲ್ಲಿ ಪಲಬರ್ ಚೆಲ್ವಪ್ಪಿನಂ ಚೆನ್ನೆಯರ್ ‖೨೧

೧. ನಿವಿರ್ದಾ ಕ‖ ೨. ರೆಯ್ತಾರೆ ಕ‖

ತಿಸರಂ ತೊಳಗುವ ಮುತ್ತಿನ ।
ಪಸರಂ ಮೊಲೆ ಬೆಟ್ಟ ತಿವಳಿ ತೆರೆಯೆಂದೆನೆ ಸಂ ॥
ತಸದ ಕಡಲಂತೆ ಮೆಲ್ಲನೆ ।
ಪೊಸವೆಂಡಿರ್ ಗಡಣಮೆಸೆವಿನಂ ನಡೆತಂದರ್ ॥೯೪॥
ಎಡೆಗಿಱಿವ ಮೊಲೆಯ ಪೊಱೆಯಿಂ ।
ಬಡನಡು ನಡೆ ನೋಡುವವರ ಬಗೆ ನಡುಗುವವೊಲ್ ॥
ನಡುಗೆ ನಲವಿಂದವೊಡನೊಡ ।
ನಡಿಯಿಟ್ಟರ್ ನೆರೆದು ಬಿಂಕಗಾತಿಯರರೆಬರ್ ॥೯೫॥
ಇಸಲೊಡರಿಸುವಿಂಗೋಲನ ।
ಮಿಸುಗುವ ಪೊಸವಿಲ್ಲ ಜೇವೊಡೆಯ ದನಿಯವೊಲೆ ॥
ಣ್ದೆಸೆಯೊಳ್ ನೇವುರದುಲಿ ಪಸ ।
ರಿಸೆ ಮೆಲ್ಲನೆ ಚೆಲ್ಲಗಾತಿಯರ್ ನಡೆತಂದರ್ ॥೯೬॥

ವ॥ ಅಂತು ಪರಿಪರಿಯ ಸಿಂಗರದಿನಂದಂಬಡೆದು ನಡೆವ ಮಡದಿಯರ ಮುಡಿಯೊಳ್ ತೊಡರ್ದ ಪೊಸಪೂಗಳ ಕಂಪಿಂಗೆಳಸಿ ಮೇಲೆ ಬಳಸಿದ ಮಱಿದುಂಬಿಯ ಬಂಬಲ್ ಎತ್ತಿಪಿಡಿದ ಪೀಲಿದಟ್ಟಿಯಾಗೆ ಬಂದು ಬನದ ಬಾಗಿಲಂ ಪುಗುವಲ್ಲಿ ॥೯೭॥

ತಳಿರಂ ಮೆಲ್ಲನೆ ನೂಂಕಿ[3] ಮಾಮಿಡಿಗಳಂ ಸೆಂಡಾಡುತುಂ ಕೂಡೆ ಪೂ । ಗಳ ದೂಳಿಂ ಪೊಱೆಯೇಱುತುಂ ಸೊನೆಗಳೊಳ್ ನೀರಾಟಮಂ ಮಾಡುತುಂ ॥ ಒಱೆಯಂ[4] ಕೈಮಿಗೆ ಬರ್ಪ ತುಂಬಿಯುಲಿಯಿಂದಂ[5] ಡಂಗುರಂಬೊಯ್ಸುತುಂ । ತಳರ್ದೆಂ[*] ಬಂದುದೊ ಕಾವನಾನನೆಯ[6] ಪೊಲಾತಣ್ಗಾಳಿ ತನ್ನಿಚ್ಛೆಯಿಂ ॥೯೮॥

೧. ಇಡಿಕಿರಿದ. ಕ॥ ೨. ಬಸೆದೊಡನಿಸು. ಕ॥
೩. ಸೋಂಕಿ ೪. ಚೆಳೆಯಂ. ೫. ಗಳಪಿಂಡಿಂ. ೬. ಯೆನಲು. ಇವು ಕಾವ್ಯಸಾರದಪಾಠ

ಆಗಾಳಿಯ ಮೆಲ್ಸೋಂಕಿಂ ।
ದಾಗಳ್ ಬೆಮರೊಡನೆ ಬಳೆದ ಸೇದೆಯದೆತ್ತಂ ॥
ಪೋಗೆ ನಲವಿಂದೆ ಪೊಕ್ಕಂ ।
ಬೇಗದೆ ಪಡಿಯುಱಿರ ಜಡಿಪವೆಡೆಗೊಳ್ ಬನಮಂ ॥೯೯

ವ॥ ಅಂತು ಪೊಕ್ಕು ಪಚ್ಚೆಯ ಪಡ್ಡಳಿಯ ಪಾದರಿಯ ಪಲಸಿನ ತೆಂಗಿನ ಕಾಂಗಿನ ದಾಳಿಂಬದ ದವನದ ಮರುಗದ ಮಲ್ಲಿಗೆಯ ಮಾವಿನ ಮಾದಲದ ಸುರಗಿಯ ಸುರಹೊನ್ನೆಯ ಇರವಂತಿಯ ಸೇವಂತಿಯ ಕಂಪುಮಿಗುವ ಸಂಪಗೆಯ ಸಸಿಯ ಸಾಲ್ಗಳ ನಡುವೆ ನನೆಯುಂಬುಂ ನಡೆವಾಗಳ್ ಬಲಗೆಲದೊಳ್ ಕೈಗೊಟ್ಟು ಬರ್ಪ ನಗೆಗಾಱನಿಂತೆಂದಂ ॥೧೦೦

ಎಸೆವಲಗೊರ್ಂಚಲಂ ತಳೆದ ಮಲ್ಲಿಗೆ ಪೂವಿನ ಸಂತೆ ಕೊಂಬಿನಿಂ।
ಮಿಸುಗುವ ಮಾಮರಂ ಪೆಸರ ಮಾಳಗೆ ಮಾಡಿದ ತೋರವೆಟ್ಟುಗಳ್।
ಪೊಸಮನೆ ಸುತ್ತಲುಂ ಬಳಸಿ ಪರ್ವಿದ ಕೇದಗೆ ಪಚ್ಚೆವಾಗಿಲೆಂ।
ಬೆಸಕಮನಾಳ್ದು ಪೂಗಣೆಯನಿರ್ಪ ಪೊಱಲ್ಗಣೆಯಾದುದೀಬನಂ ॥

ನಿನ್ನ ಬರವಱಿದು ನಲವಿಂ ।
ಮುನ್ನಮೆ ಗುಡಿಗಟ್ಟಿದಂತೆ ಪೊಸಪೂಗುಡಿಯಿಂ ॥
ದನ್ನೆರೆದು ನಿಮಿರ್ದ ಕುಡಿಯಿಂ ।
ಚೆನ್ನಂ ತಳೆದೆತ್ತಿದಂತೆ ಮಲ್ಲಿಗೆಯೆಸೆಗುಂ ॥೧೦೨

ಅಡರ್ದೆಲೆವಳ್ಳಿಗಳೆಲೆಯುಂ ।
ಪಿಡಿದಿರ್ಪಳಗಂಗಿನಲ್ಲಿ ತರತರದಿಂ ನೇ ॥
ರ್ಪಡೆ ಸಮೆದೆಲೆವಸರದವೊಲ್ ।
ಕಡುಚೆಲ್ವಂ ಪಡೆದು ತೋರ್ಪುವೀಬನದೆಡೆಯೊಳ್ ॥೧೦೩

---

೧. ಮೇಲೆಸೋಂಕಿದೊ। ಡಾ. ಕ॥ ೨. ಜಡಿಪದೆಡೆ ಕ॥ ೩. ಪೊಚ್ಚೆಯ ಕ॥
೪. ಗಳ್. ಕ॥

ಪುದಿದ ತನಿವಣ್ಣ ಬಿರಿಕಿಂ ।
ದುದಿ*ರ್ದೆತ್ತಂ ರಾಸಿಯಾದ ಓಟ್ಟುಗಳಿಂ ಪೆಂ ॥
ಪೊದವಿದ ಪಲವುಂ ದಾಳಿಂ ।
ಬದ ಮರಗಳ್ ರನ್ನವಸರದಂತೆಸೆದಿರ್ಕುಂ ॥೧೦೪॥

ಮಿಸುಪಲ*ರ್ಗಳ ಬೆಳ್ಪಿಳಗಿಂ ।
ಮುಸುಕಿದ ತಾವರೆಗಳೆಲೆಯುನಾಂತ ಕೊಳಂಗಳ್ ॥
ಪಸರಿಸಿದ ಕಂಚುಗಾಜಿರ ।
ಪಸರದವೋಲ್ ನಾಡೆ ತೋರ್ಪುವೀಕೆಲಬಲದೊಳ್ ॥೧೦೫॥

ಬಗೆಗೊಳೆ ಮೆಲ್ಲನೆ ನಡೆವಂ ।
ಚೆಗಳಂ ತಳ್ದಿರ್ಪ ಬಳ್ಳಿಮಾವಿನ ಸಾಲ್ಗಳ್ ॥
ನೆಗ*ಟ್ದ ಬೆಲೆವೆಣ್ಗಳಂದದೆ।
ಮಿಗೆ ಸೋಲಿಪ ಸೂಳೆಗೇರಿಯಂತಿವೆ ಬನದೊಳ್ ॥೧೦೬॥

ಇಟ್ಟಣಿಸಿದಲ*ರ್ಗಳಸೆದಿರೆ ।
ಕಟ್ಟುದ್ದಮನಾಂತು ಮಿಸುಪ ಕೊಸಗಿನ ಚೆಲ್ವೇಂ ॥
ಪುಟ್ಟಿಸಿದುದೊ ಪೊಸಸಿರಿಗೆಜ ।
ವಟ್ಟನೆ ಪೂಗಣೆಯನಿರ್ಪ ನೆಲೆಮಾಡದವೋಲ್ ॥೧೦೭॥

ನನೆಗಳ ಪೂಗಳ ಪೊರ್ಳಯಿಂ ।
ದೆನಸುಂ ತಲೆವಾಗುತಿರ್ಪ ಸೆಳೆಗೊಂಬಿಂನೆ ॥
ಟ್ಟನೆ ಪರಿವಡೆದೀಸಂಪಗೆ ।
ನಿನಗೆಜಗದರೆಜಗಿಪಂತೆ ತೋರ್ಪುವು ಬನದೊಳ್ ॥೧೦೮

ನೆಗ*ಟ್ದರವಂತಿಯ ಮನೆಗಳೂ ।

೧. ಗಸರನೆರಗಿಸುವಂತೆ. ಕ॥

ಳಗಲಮನೊಳಕೊಂಡು ಪಲವು ಪಳುಕಿನ ಸಱಗಳ್ ||
ಬಗೆಗೊಳೆ ನಿನಗಿಕ್ಕಿದ ಗ |
ದ್ದುಗೆಗಳವೊಲ್ ಕೂಡೆ ತೋಱುವೀಕಟ್ಟದಿರೊಳ್ ||೧೧

ವ|| ಎಂದು ಮುನ್ನವಿೞಾಬನಂ ಪಟ್ಟಣದಂತಿರ್ಪುದೆಂದು ನುಡಿದ ನುಡಿಯುಂ ಪರಿವಿಡಿಯುಂ ನನ್ನಿ ಮಾಡಿದೆಯೆಂದು ತೊನೆಯುತ್ತೆ ಕೞದೆಡೆಯಂ ಪೋಗೆವೋಗೆ ||೧೧

ಕನಗೋಸರಿರ್ಕೆ ನುಣ್ದಳಿರ ಬಾೞ್ವನೆ ಕೆಂದಳಿರಿರ್ಪ ಬೀಡು ಬ |
ಲ್ನನೆಯು ಪೊದಟ್ ಮುಗುಳ್ನನೆಯು ಪೆರ್ಮನೆ ಮೊಗ್ಗೆಯು ತಾಣಮಚ್ಚವೂ
ವಿನ ನೆಲೆ ಸಣ್ಣಗಾಯು ಬಲುಗಾಯು ಪೊಲಲ್ ನಸು ದೋಱೆವಣ್ಣತಾ |
ಯ್ವನೆ ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದದೊಂದು ಮಾಮರಂ ||

ಮೊಱೆಯದ ತುಂಬಿಯುಂ ಕುರುಳ ಸಂದಣಿ ಸೋಲಿಸೆ ಜಕ್ಕವಕ್ಕಿಯುಂ
ಪರಿವಡೆದಿರ್ದ ತೋರಮೊಲೆ ಬಗ್ಗಿಸೆ ನೈದಿಲನೆಯ್ದೆ ಕಣ್ಮಲರ್ ||
ಕೊರಗಿಸೆ ನಾಡೆ ಕೆಂದಳಿರನೋವದೆ ಕೆಂದಳಪುಕ್ಕೆ ಮೆಟ್ಟೆ ಮಾ |
ಮರದಡಿಯಲ್ಲಿ ನಿಂದ ಬನದಣ್ಣನಿಪೆಂದದಿನೊರ್ವಳೊಪ್ಪಿದಳ್ ||೧೩

ವ|| ಅವಳಂ ತೊಟ್ಟನೆ ಕಟ್ಟದಿರೊಳ್ಕಂಡು ನನೆಯುಂಬಂ ತನ್ನ ಬಗೆಯೊಳಿಂತೆಂದಂ ||೧೪

ಕರಮೆಸೆವ ರೂಪು ಕಣ್ಗ |
ಚ್ಚರಿಯಂ ಪುಟ್ಟಿಸಿದುದೀಕೆಯಾವಳೊ ನೆಲದೊಳ್ ||
ಪಿರಿದುಂ ಮಾನಸಿಯಗೀಱ |
ಪರಿಚೆಲ್ವಿನಿತುಂಟೆ ಸಗ್ಗದಾಕೆಯೊ ದಿಟದಿಂ ||೧೫

ವ|| ಎಂದು ಪತ್ತೆಸಾರ್ದು—ನೀಮಾರ್, ಎಂದು ಮೆಲ್ಲನೆ ಬೆಸಗೊ

ೞ್ವುದುಂ; ಆಅಚ್ಚರಸಿ—ಬಿನದದಿಂ ಬನದ ಸೊಂಪಂ ನೋಡಲೆಂದೈತಂದೆಂ, ಎನೆ; ನಾಡೆಱೆಯನಿಂತೆಂದಂ ॥ ೧೧೬

ಮಿಗೆ ಮುನ್ನಂ ಕಂಡವೊಲಿರ್ದಪುದು ಮಿಸುಗುವೀಬಾಱಿಯೀಕಾಲ್ಗಳೀಸಂ । ಪಗೆಯಿನೇಱಿಲ್ಗಳೀಪಾದರಿ ಬಿಡೆ ಮೊರೆವೀತುಂಬಿಯಿಾಕೊಂಚೆಯಿಾಮ ॥ ಲ್ಲಿಗೆಯಿಾತಣ್ಗಾಳಿಯಿಾಕೋಗಿಲೆಯ ಬಳಗಮಿಾಸೋಗೆಯಿಾಸೊಂಪಿನಿಮ್ಮಾ । ವುಗಳೀಚೆನ್ನೈದಿಲೀಕೆಂದಳಿರ ತುಱುಗಲ್ಲೀಯಂಚೆಯಿಾಕರ್ವುದೋಂಟಂ ॥ ೧೧೭

ಅಱಿತಂ ನಿಮಗುಂಟೆಂತಾ ।
ತೆಱನಂ ನೀಮೆನಗೆ ಪೇೞ್ವುದುಳ್ಳುದನೆನೆ ಬಾ ॥
ಯ್ದೆಱೆ ಸುಲಿಪಲ್ಗಳ ಮಿಂಚಂ ।
ಕಱೆಯುತ್ತಿರೆ ತಿಳಿಯೆ ಪೇೞಲೆಂದಿಂತೆಂದಳ್ ॥ ೧೧೮

ವ॥ ಅದೇನೆಂದೊಡೆ:—ಪೊಂಗೇದಗೆಯ ಬಾೞ್ವೇಲಿಯೊಳಂ, ಪನ್ನೀರ್ಗಾಲ್ವೆಯೊಳಂ, ಕುಂಕುಮದ ಮಡುಗಳೊಳಂ, ಬಕುಳದ ಬಾಗಿಲ್ವಾಡದೊಳಂ, ಮರುಗದಟ್ಟಳೆಯೊಳಂ, ಪೊಂಬಾಳೆಯ ಪಱವಿಗೆಗಳೊಳಂ, ಪಾದರಿಯ ನೆಲೆವಾಡಂಗಳೊಳಂ, ದವನದ ದಾವಣಂಗಳೊಳಂ, ಮಲ್ಲಿಗೆಯ ಮನೆಗಳೊಳಂ, ಕಪ್ಪುರದ ಸೊದೆಯೊಳಂ, ಸೊಂಪುವಡೆದ ಕಂಪಿನ ಪೊಱಲೆಂಬ ಬೀಡು ಬಗೆಗೊಳಿಸುತಿರ್ಪುದು ॥ ೧೧೯

ಚದುರುಂ ಮಿಕ್ಕಿರ್ದ ತಕ್ಕುಂ ನೆಲಸಿದ ಸೊಬಗುಂ ಮೈಮೆಯುಂ [1]ಚಾಗಮುಂ ಪೆ । ರ್ಚಿದ ಸೊಂಪುಂ ಪೆರ್ಮೆಯುಂ ನನ್ನಿಗೆ ನೆಲೆಯೆನಿಸಿರ್ದಾಯುಮುಂ ಬೀರಮುಂ ಕುಂ ॥ ದದ ಚೆಲ್ವುಂ ರೂಡಿಯುಂ ಕೈಮಿಗೆ ನೆಲನನಿತಂ ಗೆಲ್ದು ತನ್ನಿಚ್ಚೆಯಿಂದಿ । ನ್ನಿದನಾಳ್ವಂ ಕರ್ವುವಿಲ್ಲಂ ಪಡೆದೊ

೧ ಚಾಣ್ಮೆಯುಂ ಕ॥

ಡವೆಗಳಂ ಸಾರ್ದವರ್ಗೀಯುಬಲ್ಲಂ ||೧೨೦||

ಇನಿಯರನೆಂದುಂ ನೆರೆಯಿಪ |
ಬಿನದಮೆ ತನ್ನಿಚ್ಚೆಯಾಗೆ ರೂಢಿಸಿದಾಕಾ ||
ವನ ನಚ್ಚಿನ ಪೆಂಡತಿ ಚೆ |
ಲ್ವಿನ ಪುತ್ತಳಿಯಿಚ್ಚೆಗಾರ್ತಿಯೆಂಬಳ್ ಪೆಸರಿಂ ||೧೨೧||

ಸೊಗಯಿಪ ಜಕ್ಕವಕ್ಕಿಗಳನೇಱಿಪ ಪೆರ್ಮೊಲೆಯಿಂದೆ ಮಿಾನ್ಗಳಂ |
ನಗುವಲ*ರ್ಗಣ್ಗಳಿಂದೆ ಸುೞಿಯುಂ ಪೞಿದೊಪ್ಪುವ ಪೊರ್ಕುೞಿಂದೆ ಮೆ ||
ಲ್ಲಗೆ ನಡೆವಂಚೆಯಂ ಜಡಿವ ಮೆಲ್ನಡೆಯಿಂದೆ ಸಮಂತು ನೋೞ್ಪರಿ |
ಚ್ಚೆಗೆ ಪೊಸವೂಗೊಳಂಬೊಲಮ*ರ್ದೊಪ್ಪುವಳೊಪ್ಪದಿನಿಚ್ಚೆಗಾರ್ತಿತಾಂ ||

ಅವಳ ಮೊಗದಂತೆ ಮೆಯ್ಸಿರಿ |
ಸವನಿಸದೆನಗೆಂದು ಕಂದನೆ*ರ್ದೆಯೊಳ್ ತಾಳ್ದಂ ||
ಹಿಮಗದಿರನೆಂದೊಡಿನ್ನುೞಿ |
ದವರೇನಂ ಪೊಗೞಲಾರ್ಪರಾಕೆಯ ಮೊಗಮಂ ||೧೨೨||

ವ|| ಮತ್ತಮವಳ ಕಾಲ ನೇವುರದಿಂಚರಮೆಂಬ ಪೆಣ್ಣಂಚೆಯ ದನಿ ಕರ್ವುವಿಲ್ಲನೆಂಬಂಚೆಯಂ ಬೞಿವೞಿಯೊಳ್ ಬರಿಸೆಯುಂ, ನುಣ್ದೊಡೆಯೆಂಬ ಪೊಂಬಾೞೆಯ ಬಾಳ್ಗಂಬಮಲರ್ಗಣೆಯನೆಂಬ ಸೊರ್ಕಾನೆಯಂ ತೊಲಗಲೀಯದೆ ನಿಲಿಸೆಯುಂ, ಪರಿವಡೆದ ಪೊಱವಾೞೆಂಬ ಮೃಣಾಲ ದಿಣ್ಣೆ ನೀಱೆಯರ ಬಲ್ಲಹನೆಂಬ ನೀರ್ವಕ್ಕಿಯ ಕಾಲಾಟಕ್ಕೆಡೆಗುಡೆಯುಂ, ಗುಣ್ಪುವಡೆದ ಪೊರ್ಕುೞೆಂಬ ತಿಳಗೊಳಂ ಕಮ್ಮಂಗೋಲನೆಂಬ ಜಕ್ಕವಕ್ಕಿಯನೋಲಾಡಿಸೆಯುಂ, ತೊಳಪ ತೋರಮೊಲೆಗಳೆಂಬ ಪೂಗೊಂಚಲ್ ಪೂಸರಲನೆಂಬ ತುಂಬಿಗಿಂಬಾಗೆಯುಂ, ನುಣ್ಪುವಡೆದ ನಳತೋಳ್ಗಳೆಂಬ ಸೆಳೆಗೊಂಬುಗಳ್ ಕಾವನೆಂಬ ಗಂಡುಗೋಗಿಲೆಯಂ ತೇಂಕಿ

ಸೆಯುಂ, ಮಿಸುಪ ಸುಲಿಪಲ್ವೆಳಗೆಂಬ ಕಾರಮಿಂಚಿಂಗೋಲ್ವಿಲ್ಲನೆಂಬ ಸೋಗೆಯಂ ಸೋಲಿಸೆಯುಂ, ಮಿಳಿರ್ವ ಬಂಬಲ್ಗುರುಳೆಂಬ ತೊಡಂಕುವಲೆ ಬಸಂತನ ಕೆಳೆಯನೆಂಬೆರಲೆಯಂ ಸಿಲ್ಕಿಸೆಯುಂ ಇಂತಳವಿಗೞಿದ ಸೊಬಗಿನ ಸೊಂಪು ಪೆರ್ಚಳವಾಗಿರ್ಪುದುಂ ॥೧೨[illegible]

ಅವರಿರ್ವರ ಮೈಮೆಯುಮಂ ।
ತವರಿರ್ವರ ರೂಡಿವಡೆದ ಪೊಸಗಾಡಿಯುಮಂ ॥
ತವರಿರ್ವರ ಬೇಟಮುಮಂ ।
ತವರಿರ್ವರೊಳಲ್ಲದಿಲ್ಲ ಪೆಱತೊರ್ವರೊಳಂ ॥೧೨[illegible]

ವ॥ ಮತ್ತಮವರೊರ್ಮೆ ಪಲತೆಱದ ಮರಂಗಳಿಂದಡೆಗಿೞಿದಡವಿಗಳೊಳ್ ಕಾಡೊಡೆಯರಂತೆ ಬಿರಯಿಗಳೆಂಬ ಮಿಗಂಗಳ ಬೇಂಟೆಯನಾಡಿಯುಂ, ಮತ್ತಮವರೊರ್ಮೆ ಪೊಳೆವ ಕಟ್ಟಱಕದ ಕಟ್ಟಗೆಗಳಿಂದಿಟ್ಟಣವಾದ ತಿಳಿಗೊಳಂಗಳೊಳಾನೆಯಂತೆ ನೀರಾಟಮನಾಡಿಯುಂ, ಮತ್ತಮೋರೊರ್ಮೆ ಪಲತೆಱದ ನಳನಳಿಸಿ ಬೆಳದೆಳವಾೞೆಯ ಸುೞಿಯೆಲೆಯನುಡಿಯೊಳಮರ್ಚಿಯುಂ, ಮತ್ತಮೋರೊರ್ಮೆ ಕೞ್ತಲೆಗೆ ನೆಲೆವನೆಯೆನಿಪೆಳವಳ್ಳಿಯ ಬಳಸಿಂಗೊಳಗಾದಸುಗೆಯ ಜೊಂಪಂಗಳೊಳ್ ಕೋಗಿಲೆಯಂತೆ ಕೂಟಮನೊಡರ್ಚಿಯುಂ; ಇಂತು ಪಲವುಂ ಪಗಲಂ ಕಳೆಯುತ್ತುಮಿರ್ದೊರ್ಮೆ ॥೧೨[illegible]

ಬೆಳದೆಳವಳ್ಳಿಯೊಳ್ ಪುದಿದು ತೋಱುವ ಮಾವಿನ ತೋರಗಂಬದಿಂ।
ತಳಿರ್ಗಳನಿಂಬುವೆತ್ತ ಪೊಸಲೋವೆಗಳಂ ನಸುಬಾಗಿ ಕೊಂಬಿನೊಳ್॥
ಪೊಳೆವೆಳಗಾಯ ನುಣ್ಬೊಗರಿಯಿಂ ಸುೞಿತರ್ಪೆಲರಿಂದೆ ಬಿೞ್ದಪೂ।
ಗಳ ಪುಡಿಯಿಂ ಕರಂ ಸೊಗಯಿಪೋಲಗಸಾಲೆಯೊಳಿರ್ದರೊಪ್ಪದಿಂ ॥

ನಡೆಕೆಲಕಂಚೆಬಿನ್ನವಿಸು ಬೇಗದೆ ಕೋಗಿಲೆ ಪಾಡಿನೋಜೆಯಂ ।

ಗಡಣಿಸು ತುಂಬಿ ಸೋಗೆ ದನಿಯೆತ್ತದಿರೊಯ್ಯನೆ ಬಂದು ಕುಳ್ಳಿರೀ ||
ಯೆಡೆಗೆ ಬಸಂತಯೆಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ|
ಪಡಿಯಱರಾಗಿ ಚಪ್ಪರಿಪುವೋಲಗದೊಳ್ ಸಲೆ ಕರ್ವುರ್ವಿಲ್ಲನಾ ||೧೨

ತೊಲಗದೆ ಪಕ್ಕದೊಳ್ ನಲಿವ ಕನ್ನಡವಕ್ಕಿಗಳೋಳಿ ಬಿಂಕದಿಂ ।
ಬಲಗೆಲದೊಳ್ ನೆಗೞ್ತ್ವಡೆದಿರ್ಪರಸಂಚೆಯು ಪಿಂಡು ಬೇಟವ ||
ಗ್ಗಲಿಸಿದ ಜಕ್ಕವಕ್ಕಿಗಳ ವಂಗಡಮಿಂಬಱದಿರ್ಪ ಗಂಡುಗೋ ।
ಗಿಲೆಗಳ ತಂಡವೊಪ್ಪೆ ಬಗೆಗೋಲಗವೊಪ್ಪಿದುದಂದು ಕಾವನಾ ||

ಮಡದಿಯರ ಸುಯ್ಯ ಕಂಪುಂ|
ಕಡುಮೆಱೆವಿನಮಿಟ್ಟ ಕತ್ತುರಿಯ ಪೊಸಗಂಪುಂ ||
ಮುಡಿಯಲರ್ಗಳ* ನಱುಗಂಪುಂ ।
ಗಡಣಿಸಿ ಕಡೆಗೋಡಿವರಿದು ಪೊಡೆಸ್ತೋಲಗದೊಳ್ ||೧೩

ಕೆಂದಳದೊಂದು ಕೆಂಪು ಕಿಸುಸಂಜೆಯನಂಜಿಸೆ ಕರ್ಪುರ್ವೆತ್ತಕೇ ।
ಸಂ ದಳವಾದ ಕಟ್ಟಲೆಯನೇಱಿಸೆ ನುಣ್ಮೊಗವಚ್ಚದಿಂಗಳಂ ||
ಸಂದಿಸೆ ನೀಳ್ದ ಕಣ್ಬೆಳಗು ನಾಲ್ದೆಸೆಗಂ ಪೊಸತಪ್ಪ ಜೊನ್ನವಂ।
ಮುಂದಿಡೆ ಬಂದಳಾಗಳರುಳಂದದಿನೊರ್ವಳದೊಂದು ಗಾಡಿಯಿಂ ||

ವ|| ಅಂತು ನೊಸಲೆಂಬ ಪೆಱೆಗೆ ಕಯ್ದಾವರೆಗಳ್ ಮುಗಿಯೆ, ಬಱಿದೊಂದು ತೆಂಬೆಲರ್ ಬರೆ;—ಅರಸಾ ಜೊನ್ನಮನುಣ್ಬ ಪಕ್ಕಿ ಬಾಗಿಲೊಳ್ ಬಂದಿರ್ದಪುದೆಂದು ಬಗೆಯಱಿದು ಬಿನ್ನಪಂಗೆಯ್ದು, ಬಡಗೊಂಡು ಬರ್ಪಾಗಳ್ ||೧೪

ಮಿಱುಪ ಕುರುಳೋಳಿ ಮೂಡುವ ।
ಕಿಱುವೊಲೆ ತಳತಳಿಸಿ ಪೊಳೆವ ಕೇಸಡಿ ನೀಡುಂ ||
ತುಱುಗಿದೆವೆ ಚೊಲ್ಲೆಯುಂ ಮಿಗೆ ।

ಮೆಱುವಿನಮೆಳವೆಂಡಿರಿರ್ದರೆರಡುಂ ಕೆಲದೊಳ್ ॥೧೩೩॥

ನೇವುರದಿಂಚರಂ ನೆಗೞೆ ಕಣ್ಬೆಳಗೋಲಗಸಾಲೆಯೆಲ್ಲಮಂ ।
ತೀವೆ ಬೆಡಂಗುವೆತ್ತ ನೊಸಲೊಳ್ ಕುರುಳೋಳಿಗಳುಯ್ಯಲಾಡೆ ಕೆಂ॥
ದಾವರೆವೂಗಳಂ ತರದೆ ಕೇಸಡಿ ಸೂಲಿಡೆ ಬಿಂಕದಿಂ ನೆಗ ।
ೞ್ದಾವಗವೋಲಗಿಪ್ಪ ಸಱುಮಿಂಡಿಯರೊಪ್ಪಿದರೆತ್ತ ನೋೞ್ಪೊಡಂ ॥೧೩೪॥

ಸಸಿಯಂ ಮೆಯ್ವೊಳಗಿಂದೆ ಪೊನ್ನೊಡೆಯನಂಪೆಂಪಿಂದೆ ಮಾದೇವ
ನಂ । ಪೆಸರ್ವೆತ್ತಿಂಚರದಿಂದೆ ಸಂದ ಬಿದಿಯುಂ ಜಾಣಿಂದೆ ಮೆಯ್ಗಣ್ಣನಂ॥
ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೇಳ್ಮಾಡಿ ಬೇೞ್ಪಂತುಟು ।ಬ್ಬಸ
ಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗೇಂ ಬೆಡಂಗಾದರೋ ॥೧೩೫॥

ವ॥ ಅಂತು ಮೆಱೆವೋಲಗದ ನಡುವೆ ॥೧೩೬॥

ಕಿವಿಗಿಂಪಂ ಕಱೆವಂತೆ ನುಣ್ಚರದೆ ಪಾಡುತ್ತಿರ್ಪ ಪೆಣ್ದುಂಬಿಗೊ ।
ಪ್ಪುವ ಬಂಡಂ ಬಿಡದೀಯುತುಂ ಗಿಳಿಗಳೋದಂ ಕೇಳ್ದು ಮೆಲ್ಪೊಂದಿ
ತೋ॥ ಱುವ ಪಣ್ಣಂ ತಿಱುದಿಚ್ಚೆಯಿಂದೆ ಕುಡುತುಂ ಚೆಲ್ವಿಂದೆ ಸಾರ್ತಂ
ದು ಬೇ । ಡುವ ಮುದ್ದಂಚೆಗೆ ಕೈಯ ತಾವರೆಯ ಕಾವಂ ಚೆಲ್ಲದಿಂ
ನೀಡುತುಂ ॥೧೩೭॥

ತೊಡೆಯೊಳ್ ಕಾದಲೆಯಿರೆ[1] ಬಲ।
ಗಡೆಯಲ್ಲಿ ಬಸಂತನೊಲವಿನಿಂ ಕುಳ್ಳಿರೆ ತ ॥
ನ್ನೆಡದೆಸೆಯೊಳ್ ಸೊಬಗಿಯರಿರೆ ।
ಕಡುಚೆಲ್ವಂ ಪಡೆದನಾವಗಂ ನನೆಗಣೆಯುಂ ॥೧೩೮॥
ಪರಿಪರಿಯ ರನ್ನದೊಡವಿನ ।

೧. ಕಾದಲರಿರೆ. ಖ॥

ಬೆರಕೆಯ ಬೆಳಗಡರೆ ಮೆಯ್ಯನಗ್ಗದ ಪೆಂಡಿರ್ ||
ನೆರೆದಲರ ಚವರಮಂ ಬಿ|
ತ್ತರದಿಂ ಬೀಸುತ್ತುಮಿರ್ದರೆರಡುಂ ಕೆಲದೊಳ್ ||೧೩೯

ಸುಗಿವೆವೆ ಮಲೆವವರಂ ಕೋ|
ಡಗಗಟ್ಟಂ ಕಟ್ಟಿ ತರ್ಪೆವೇಂ ಬೆಸಸೆಂದೊ ||
ಯ್ಯಗೆ ಕಿವಿವೊಚ್ಚುವ ತೆಱದಿಂ |
ಸೊಗಯಿಸಿದುವು ಕಣೆಯ ಗಱಿಪವಲರ್ವಿಲ್ಲವನಾ ||೧೪೦

ಮುತ್ತಿನ ಸರಕ್ಕೆ ನುಣ್ಪಂ |
ಬಿತ್ತರಿಸಿದ ಬೆಳ್ಪುಮಲ್ಲದಿಂತೀಪೊಸಗಂ ||
ಪೆತ್ತಱದೆನೆ ನಗುವಂತಿರ್ದ |
ವತ್ತಿದ ಮಲ್ಲಿಗೆಯ ತಿಸರವೇಂ ಸೊಗಯಿಸಿತೋ! ||೧೪೧

ತನಗೆಱಕದೆಱಗದವರಂ |
ಮುನಿಸಿಂದಿಡಲೆಂದು ಸಮೆದ ಪಾಱುಂಬಳೆಯೆಂ ||
ದೆನೆ ದಾಳಂಬದ ಕೆಂಬಿ|
ಱ್ತಿನ ರನ್ನದ ತೋಳ ಬಂದಿಯೇಂ ತೊಳಗಿದುದೋ! ||೧೪೨

ಬಿರಯಿಗಳನೆಲ್ಲರಂ ಮುಳ|
ದುರವಣೆಯಿಂ ಮೆಟ್ಟಿವೆಡೆಯೊಳುಚ್ಚಳಿಸುವ ನೆ ||
ತ್ತರೊಳೊಂದಿದಂತೆ ಬಂದುಗೆ|
ಯರಲ ತೊಡರ್ ತೊಡರ್ದು ಕಾಲೊಳೇ ನೊಪ್ಪಿದುದೋ! ||

ವ || ಅಂತು ನೋೞ್ಪರ ಕಣ್ಗೆ ನೆಲೆವೀಡಾದ ನನೆವಿಲ್ಲಬಲ್ಲಹನ ಮೇ

---

೧. ನನೆಯ ಕಣೆಗಳಲರ್ವಿಲ್ಲವನಾ. ಗ||    ೨. ಸಮನಿಸಿತೋ. ಖ||
೩. ತನಗೆರಗದೊರಗುವವರಂ. ಕ||

ಲಾದ ಸೊಂಪಿಂಗೆ ಬೆಕ್ಕಸಂಬಡುತ್ತುಂ ಬಂದಿಂಗದಿರ್ಗಳಂ ಕಾಣ್ಕೆಗೊ
ಟ್ಟು ಜೊನ್ನವಕ್ಕಿ ಬಿನ್ನವಿಸಿತ್ತದೆಂತೆನೆ: — ||೧೪೩

ನಿನಗೆಂದುಂ ತಲೆವಾಗದ |
ನಿನಗಳ್ಕದ ನಿನ್ನ ವೇಳೆಗಾಯದ ಪಿರಿದುಂ ||
ನಿನಗೆ ಬೆಸಕ್ಕೆಯ್ದು ಬಾೞದ |
ನಿನಗೋಡದ ಪಗೆವರೆಂಬರಿಲ್ಲಿಂದುವರಂ ||೧೪೪

ವ|| ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮಂ ಗೊಟ್ಟಂ ಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು ನಿಮ್ಮಡಿಗಳುಮಂ ಮಱೆದು ಲೆಕ್ಕಿಸದೆ ಮೇಲೆ ಬಿಟ್ಟು ಪಾವುಂ ನೇವಾಳವಾಗೆ ಮೆಯ್ಯಱಿಯದಿರ್ಪನಂತುಮಲ್ಲದೆಯುಂ ||೧೪೫

ತಳಿರೆಂದೊಡಸುಗೆಯೆಂದೊಡೆ |
ಗಿಳಿಯೆಂದೊಡೆ ಕರೆವ ಕೋಗಿಲೆಗಳೆಂದೊಡೆ ಬಂ ||
ದೆಳವಾವೆಂದೊಡೆ ನೆಱೆದಿಂ |
ಗಳ ತಣ್ಬೆಳಗೆಂದೊಡುದ್ದಮುರಿವಂ ಗೊರವಂ ||೧೪೬

ಪುದಿದುರಿಗಣ್ಣನಾಣೆಯನದೇವ್ರೊಗಱ್ವಂ ಮುಗುಳೆಂದು ಮುಟ್ಟಬಾ|
ರದು ಬನಮೆಂದು ಬಾಯ್ದೆಱೆಯಬಾರದು ಸಂಪಗೆಯೆಂದು ಸೂಡಬಾ||
ರದು ಕೊಳನೆಂದು ಕೈದುಡುಕಬಾರದು ತಾವರೆಯೆಂದು ತೋಱಬಾ|
ರದು ಪೊಸಸುಗ್ಗಿಯೆಂದುಸಿರಬಾರದು ತನ್ನಯ ಮಂಜುವೆಟ್ಟನೊಳ್ ||

ವ|| ಮತ್ತಮಾತಂ ಸರಿಯೊಳಾದೊಡಮಂಚೆಯೆಂಬುದಂ, ಕೆಱೆಯೊಳಾದೊಡಂ ಬಾೞೆಯೆಂಬುದಂ, ಸಿರಿಕಂಡದೊಳಾದೊಡಮಾಱಡಿಯೆಂಬುದಂ, ಕೊಡಗೂಸಿನುಡಿಗೆಯೊಳಾದೊಡಂ ಸೋಗೆಯೆಂಬುದಂ, ಬೆದಂಡೆಯೊಳಾದೊಡಂ ಪಾಡೆಂಬುದಂ, ಕೇೞಿಯೊಳಾದೊಡಂ ನೆರೆಯೆಂಬು

ದಂ, ಚಪ್ಪರಣೆಯೊಳಾದೊಡಂ ಪಣ್ಣೆಂಬುದಂ ಸ್ಪೈರಿಸಂ; ಅಲ್ಲದೆಯುಂ ಈಪ್ರೋದಿರುಳ್ ಕಲಿಯ ಕಾಳೆಗಮುಂ ಕಾದಿ ||೧೪

ತಾರಗೆಗಳಱಿಯೆ ನೆಯ್ದಿಲ್ ।
ನೀರಂ ಪುಗೆ ಕೊಡೆ ಮುೞುಗೆ ಮೆಯ್ವೊರ್ಚೆ ಕಡಲ್ ॥
ನೀರೋಡುವಿನಂ ಪೆಱಯುಂ ।
ಬೀರದಿನಾಗೊರವನೆಯ್ದೆ ಬಾಚ್ಚಲೆವಿಡಿದಂ ॥ ೧೪೫

ವ|| ಅದರ್ಕೆ ತಕ್ಕುದಂ ನಿಮ್ಮಡಿಗಳ್ ಬಲ್ಲಿರೆಂದು ಬಗೆಯಱಲಾಱ ಜೊನ್ನವಕ್ಕಿ ಬಿನ್ನಪಂಗೆಯ್ಯಲೊಡನೆ ||೧೪೬

ನೆಗೆದುರಿವ ತಲೆಯ ಕಿಚ್ಚಿನೊ ।
ಳೊಗುವಿಗೆ ನೆಯ್ವೊಯ್ದು ತಱದೆ ಪೊಣ್ಮಿದ ಮುನಿಸಿಂ ॥
ಭುಗಿಲನುರಿದೆಣ್ದುನಾದಿ ।
ಟ್ಟಿಗಳೊವೋ೯ಯೆ ತೋರಕಿಡಿಗಳಂ ಕೆದಱುವಿನಂ ||೧೪೭

ಕಡಲೊಳ್ ನೇಸಱನೆೞ್ದಲುಂ ಪೊಡವಿಯಂ ಸುಗೊರ್ತ್ತಲುಂ ಕೊಂಕಿ ಘೇ। ಳಡೆ ತಳ್ಕಂದೆಸೆಯಾನೆಯುಂ ಮುಱಿಯಲುಂ ಪೊಂಬೆಟ್ಟಮುಂ ನೂಂಕಲುಂ ॥ ಪೆಡೆಯಂ ತೊಟ್ಟನೆ ಮೆಟ್ಟಿ ಬಾಸುಗಿಯನಾದಂ ಸೀೞಲುಂ ಪೊತ್ತು ಬಾ । ನೆಡೆಯಂ ಬೇಗದಿನೆತ್ತಲುಂ ಬಗೆದ ನಾಗಳ್ ದಪ್ಪದಿಂ ದಪ್ಪಗಂ ||೧೪೮

ವ|| ಅಂತು ದೆಸೆದೆಸೆಗೆ ಮಸಗಿ ||೧೪೯

ಜವನಂ ಪತ್ತುವೆನೊಂಬತುಂ ಗರಮುನೆಣ್ಬುಂ ಗೊಂಟನೊಳ್ ಕಟ್ಟಿ ತೂ । ಗುವೆನೇೞುಂ ಕಡಲಂ ಕಡಂಗಿ ಕುಡಿವೆಂ ತಳ್ತಾಱಲಂ ಪೊಯ್ದು ತೂ । ಱುವೆನೈದುಂ ಮೊಗಮುಳ್ಳನಂ ಕೆಡಪುವೆಂ ನಾಲ್ಕುಂ ದೞಂ

1. ಬಗೆಯರಿಯಲ್ ದೋರೆ. ಕ|| 2. ದರಿಯ. ಕ|| 3. ದನಾದಂ. ಖ||

ನೂಂಕೆ ನು । ರ್ಗವೆನಾಂ ಮೂಱಡಿಯಿಟ್ಟನಚ್ಚ ಯೆರಡಂತೊಂದಾಗಿ ನೋಟ್ಪನ್ನೆಗಂ ‖ ೧೫೩

ಎನಗಂ ಮಾರಿಗಮಿದಿರಾಂ।
ಪನದಾವಂ ನಡೆದು ಪೋಗಿ ಬೇಗದೆ ಮುಕ್ಕ॥
ಣ್ಣನನಿಕ್ಕಿ ಮೆಟ್ಟಿಬಿಡ ತೊ ।
ಟ್ಟನೆ ಜಡೆಯುಂ ಕಿಟ್ಟು ಬೞಿಯ ಪೆೞಿಯುಂ ತರ್ಪೆಂ ॥ ೧೫೪

ವ॥ ಎಂದಿಂತು ನಡೆಯಲೊಡರಿಪ್ಪುದಂ ಕಂಡು ಕೆಲದೊಳಿರ್ದ ಬಸಂ ತನಿಂತೆಂದಂ ॥ ೧೫೫

ನೆಲದೞಿಕೆಯ ಬಿದಿಯುಂ ಪೊಡೆ ।
ಯಲರನನಿಂದಿರನನದಟರಂ ತವಸಿಗಳಂ ॥
ನಿಲೆ ನಟ್ಟು ನೋಯಿಸಿದುದಿ।
ನ್ನಲರಂಬಿನ ಮೊನೆಗೆ ನಿಲ್ವನೇ ಬಡಗೊರವಂ? ॥ ೧೫೬

ಜವನಂ ಗೋಣ್ಮುಱಿಗೊಂಡು ಬಾಂಬೊಲಸುರ್ಕಿಂ ಮೂಱುಮಂ ಸುಟ್ಟು ಜ । ನ್ನವನುಬ್ಬಣ್ಣರನಾದುರ್ಕೊಂದು ಮುಳಿಸಿಂ ಪೋದಿರ್ದನೆಮ್ಮ ಯ್ಯಾತನಾ ‖ ತೊವಲಂ ಮೆಲ್ವುದೆಮಾಡಿ ಮೂಜಗಕೆ ಕೇಡಂ ಮಾ ಡುವಾನೆತ್ತಿಗ । ಣ್ಣವನೊಳ್ ಕಾದುವ ಬಲ್ಪುಮೊಗ್ಗರನಿಂದಾರಯ್ದು ಮೇಲೆತ್ತುವೆಂ ॥ ೧೫೭

ಪಿರಿದಪ್ಪಾಳ್ತನದಿಂದೆ ಕೂರ್ಪವರ ಮಾತಂ ಮೀಱಿದಾಳ್ಗೆಯ್ದುದೊಳ್।
ನೆರೆದಿಂತೀಗಳೆ ಪೋಗಿ ತಳ್ತಿಱಿವೆನೆಂಬಾ ಮಾತದಂತಿರ್ಕೆ ಜೆ ॥
ಚ್ಚರದಿಂ ನಮ್ಮರಸಾಳನಟ್ಟ ಮಗುೞ್ದತಂ ಬಂದು ಪೇೞ್ವಂತುಟಂ।
ತಿರದಿಂದಂ ತಿಳಿದೆತ್ತಿ ಕಾದುವುದು ಲೇಸೆಲ್ಲರ್ಗಿದೇ ಮಂತಣಂ ‖ ೧೫೮

೧. ಮೂಱಡಿಯಿಟ್ಟುನಚ್ಚಿನೆರೆದಂ. ಗ॥ ೨. ಪೊಯ್ಯುದೇನ-ನಿರ್ಪೆ. ಗ॥
೩. ಮೊಗ್ಗೆ ತಿರದಿಂದಾ. ಖ॥ ೪. ನಾವಾತಂತದಂತಿರ್ಕೆ. ಕ॥ ಗ॥

ವ|| ಎಂದು ಬಿನ್ನಪಂಗೆಯ್ದು ಬಸಂತನ ಮಂತಣದ ಮಾತಂ ಸೊರ್ಕಾನೆ ಮಂತಣೆಯು ಮಾವಂತನ ಮಾತಂ ಮನ್ನಿಸುವಂತೆ ಮನ್ನಿಸಿ ತೆಂಗಾಳಿಯೆಂಬ ದೂದನಂ ಕರೆದು, — ಗೊರವನಲ್ಲಿಗೆ ಪೋಗಿ ನಮ್ಮ ಪೆಱ್ಯುಂ ತಡೆಯದೆ ಬಿಡಿಸಿಕೊಂಡು ಬಾಯೆಂದೊಡಾತಂ ಬೇಗಂ ಮುಂಚುವೆಟ್ಟವನೆಯ್ದಿ ತೆಟ್ಪುಲ ಬನದ ಚೆಲ್ವಂ ನೋಡಿ ಮೆಚ್ಚುತ್ತುಂ ಬಂದು ತನ್ನ ಬರವಂ ಪಡಿಯಱರ್ಗಱಿಪಿ ತೆಱಪಱಿದೋಲಗದೆಡೆಯುಂ ಪುಗಲೊಡನೆ ||

ಉರಿಗಣ್ಣಿನೊಗೆದ ಬೀರಂ|
ಬೆರಸೊದವಿದ ನಂಜು ರೂವುವೆತ್ತವೊಲೀನ||
ಚ್ಚರಿಯಂ ಪುಟ್ಟಿಸಿದರೊ ಬಂ|
ದೆರಡುಂ ಕೆಲದಲ್ಲಿ ನಿಂದ ಬೀರಗಣೇಸರ್! ||೧೬೨

ಬಗೆ ಪೊಱಸೂಸದೆ ಕೈಯುಂ|
ಮುಗಿದೊಲವಿಂ ನೋಡಿ ಪೆರ್ಚುತುಂ ತಿರಿಸುಳಿಯಂ||
ಪೊಗೞುತ್ತಿರ್ತರದಿಂದೋ|
ಲಗದೊಳ್ ಕುಳ್ಳಿರ್ದ ಜತಿಗಳೀನೊಪ್ಪಿದರೋ! ||೧೬೩

ಬಳಸಿದ ತಾರಗೆಗಳ ಮಾ|
ರ್ಪೊಳಪೊಂದಿದ ಪೊನ್ನ ಬೆಟ್ಟು ಕೈಯುಂ ಕಾಲಂ||
ತಳೆದಿರ್ದುದೆಂಬಿನಂ ಕ|
ಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ ||೧೬೪

ಸೊಗಯಿಪ ಪೊನ್ನನೇವುರದ ಮೆಲ್ಲುಲಿ ಮಾಣದೆ ಮೂಱು ಕಣ್ಣನಂ|
ಪೊಗಟ್ವವೊಲುಣ್ಮೆ ಪೊಣ್ಮೆ ಪಿರಿದುಂ ಸುಱಪಾಸುಡಿವೆಣ್ಣನಾಂತ ನಾ||
ಲ್ಮೊಗಮಿರದಚ್ಚದಾವರೆಯ ಚೆಂದಮನಂದೊಳಕೆಯ್ಯ ಬಂದು ನೆ|
ಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋಟ್ಪರಾ||

ದರೆಯುಂ ಪ್ರೋತ್ಸಾನೆಯ ಕೈ।
ಗೊರೆಯೆನೆ ಕಡುವೆಟ್ಟಿತಾದ ನಾಲ್ಕುಂ ತೋಳುಂ॥
ಕರಮೆಸೆದಿರೆ ಕುಳ್ಳಿರ್ದಂ।
ಸಿರಿಯುರಸಂ ಕಾರ ಮುಗಿಲ ರೂವೆಂಬಿನೆಗಂ॥೧೬೫॥

ಮಿಗೆ ಮಾತಾಡದಿರೇಂದಿರ್ ಮಿಡುಕದಿರ್ ಮೇಲ್ವಿೞಿದಿರ್ ಸೊರ್ಕದಿರ್। ನಗದಿರ್ ಬಾಯ್ಕಡಿಗೊಳ್ಳದಿರ್ ಕಿಱುಚದಿರ್ ಮೆಯ್ಯೊಂಕದಿರ್ ಕೈಗಳಂ॥ ಮುಗಿದಿರ್ ನೂಂಕದಿರೆತ್ತದಿರ್ ಗಱಪದಿರ್ ನೀನೆಂದು ಮುಕ್ಕಣ್ಣನೋ। ಲಗದೊಳ್ ತನ್ನೊಡನಾಡಿಗೂಡಿ ಜಡಿದಂ ಮಾಕಾಳನೋರೊರ್ವರಂ॥೧೬೬॥

ವ॥ ಅಂತು ಮೈಮೆವೆತ್ತೋಲಗದ ನಡುವೆಯಾರಮನೋಸರಿಸದೆ ಬಿಗಿದ ಪಾಸಮಿದೆಂಬಂತೆ ನೀಳ್ದ ಕೆಂಜೆಡೆಗಳೊಳಂ. ಮಿಸುಪ ನೊಸಲ ಚೆಲ್ವು ಕಣ್ದೆಱೆದಂತೆ ತೋರ್ಪ ನೊಸಲಕಣ್ಣೊಳಂ, ಪತ್ತೆಸಾರ್ದ ಮರುಳ ಮೊತ್ತಮಂ ಬುಸ್ಸೆಂದು ಬೆದಱಿಸುವ ಪಾವಿನ ತೊಡವುಗಳೊಳಂ, ಜಸಮೆ ತನಗೆ ಮೆಯ್ಸಿರಿಯೆಂಬುದನಱಿಪುವಂತೆ ಪೂಸಿದ ಬೂದಿಯೊಳಂ, ನುಣ್ಪುವಟ್ಟು ತೋಱೆ ಬಿಗಿದುಟ್ಟ ಪುಲಿದೊವಲೊಳಂ, ತಕ್ಕಿನಿಂ ಮಿಕ್ಕು ಪೋರ್ದಾನೆರಕ್ಕಸನ ಸಮ್ಮದ ಮೋಲ್ವೊದಿಕೆಯೊಳಂ ಚೆಲ್ವನಾಂತು।[೧]

ಹರಿಸದೆ ಸಗ್ಗದ ಜತಿಗಳ್।
ನೆರೆದಂತೆರಡುಂ ಕೆಲಂಗಳೊಳ್ ತರದಿಂ ಕು॥
ಳ್ಳಿರೆ ಕುಳ್ಳಿರ್ದಂ ನಡೆನೋ।
ಟ್ಟರ ಕಣ್ಗಳ ಹಬ್ಬಮೆಂಬಿನಂ ಕಱಿಗೊರಲಂ॥೧೬೭॥

ವ॥ ಅಂತೆಸೆದಿರೆಯಾನಂಜುಗೊರಲನ ಗಾಡಿಯುಂ ನೋಡಿ ಬಗೆಯೊ

೧. ಅಂತಿದಾ:ನಂಜು. ೩॥

ಳಚ್ಚರಿವಡುತುಂ ಬಂದು ತುಱುಗ್ಗೆಯ್ದು ಕೈಗಳಂ ಮುಗಿದು ನೆರೆದೋಲಗಮನಿತುಂ ತನ್ನಂ ನಡೆ ನೋಡೆ ಬಿನ್ನಪಮೊಂದಾದೂದನಿಂತೆಂದಂ:— ಎಲ್ಲೆಡೆಗಳುಮಂ ತನ್ನಟ್ಟಿದೋಲೆಗಮಿಟ್ಟುಂಡಿಗೆಗಂ ಬಸಂಮಾಡಿದ ನನೆವಿಲ್ಲ ಬಲ್ಲಹಂ ನಿಮ್ಮಡಿಗಳ ಪೆಸರಂ ಪಲಂಬರಿಂ ಕೇಳ್ದು ಕೆಳೆತನಮಂ ಬಳೆಯಿಸುವಿಚ್ಛೆಯಿಂದೆನ್ನಂ ಕಳುಪಿದನಾತನ ಬಲ್ಪಂ ಪೊಗೞ್ವೊಡೆನ್ನ ಪವಣಲ್ತು, ಆದೊಡಮಱೆವನಿತಂ ಪೇೞ್ವೆನದೆಂತೆನೆ:— ॥೧೩॥

ಅವನ ನುಡಿಗವನ ಮಂತಣ ।
ಕೆವನೆಸಕಕ್ಕವನ ತಕ್ಕಿನೇೞ್ಗೆ ಮೇಲಾ ॥
ದವರ ನುಡಿಯುವರ ಮಂತಣ ।
ಮವರೆಸಕಮುಮವರ ತಕ್ಕು ಕೀೞಾಗಿರ್ಕುಂ ॥೧೪॥

ತೊಟ್ಟನಿದಂ ನಿಟ್ಟಿಸಿದಂ ।
ಬಿಟ್ಟನಿದೆಂಬೊಂದು ಬಿಲ್ಲ ಬಲ್ಮೆಯನಾರ್ಗಂ ॥
ದಿಟ್ಟಿಸುವುದರಿದು ಪಗೆವರ್ ।
ತೊಟ್ಟನೆ ಕೆಡೆದುದನೆ ಕಾಣಲುಂಟವನಿದಿರೊಳ್ ॥೧೫॥

ಕಡುಪಿಂದಾತನೊಳಾಂತರೋಟಿ ಬನಮಂ ಪೊಕ್ಕುಂ ಪೊದರ್ವಾದರ್ ಕಾಲ್ವಿಡಿದುಂ ಪಚ್ಚೆಲೆವಾದರ್ ಮೆಯ್ಗರೆದು ಕೊಂಬಂ ಪೊರ್ದಿಯುಂ ನಲ್ಮೆಯುಂ ॥ ನುಡಿದುಂ ಮೆಯ್ಸಿರಿಗೆಟ್ಟುಮಿಂತು ನೆಲದೊಳ್ ನಾಣ್ಗುಂದಿ ನಿಂದಿರ್ಪರು । ಗ್ಗಡದಿಂ ಬಂದಿದಿರೊಡ್ಡಿ ಬಾೞ್ವವರನೆಂದುಂ ಕಂಡುದಿಲ್ಲಿನ್ನೆಗಂ ॥೧೬॥

ಮೂವುಗಳವು ಮಲೆವರನೆ ।
ಮ್ಮಾವುಗಳವೊಲುೞ್ದೆ ಮುಱಿವುವೆಂದೊಡೆ ಕೇಳಾ ॥

೧. ಎಲ್ಲೆಡೆಗಣ್ಣಂ ತಾನಟ್ಟಿದೋ. ಖ॥ ೨. ಕವನೆಸಪಂತವನ ಖ॥
೩. ಮವರೆಸವಂತವರ. ಖ॥ ೪. ರ್ಪಾಡಿ. ಖ॥ ೫. ಮೆಲ್ಸಿಡಿ. ಕ॥

ಕಾವನ ಬರವಱಿದ ಒಱಿ |
ಕ್ಕಾವನ ಸೊರ್ಕ್ಱಯದಿನಿಸುಮೇನಿರ್ದಪುದೇ ? ||೧೩೭

ಸಸಿ ಕೆಳೆಯಂ ಸರಲ್ ನಿಡಿಯಬಲ್ಲನೆ ಕರ್ವಿನ ಕೋಲೆ ಬಿಲ್ ತಳ|
ರ್ತಸೆವೆಳಮಾವು ತುಂಬಿ ಪೊಸದಾವರೆ ಮಲ್ಲಿಗೆಯೆಂಬಿವಾಂತರಂ| ದೆಸೆ
ವಲಿಗೆಯ್ವ ಪಾಳ ಮೊನೆಯೊಳ್ ನೆಗೞ್ದರ್ದ ಬಸಂತನೆಂದೊಡೇಂ| ಪೆಸ
ರ್ವಡೆದಾತನೊಳ್ ಪೊಣರ್ದು ಪೋಪರೆಯೆಂಟೆರ್ದೆಯುಳ್ಳರಾದೊಡಂ||೧

ಮಿಸುಪಲರಂಬುಗಳುರ್ಕಿಂ |
ಬೆಸಕೆಯ್ಯದೆ ಮಲೆವ ಬೀರರಂ ಪರಿದೆಂಟುಂ ||
ದೆಸೆಗಳೊಳಂ ಕಾಣೆವೆನಿ |
ಪ್ಪ ಸರದೆ ಬಲ್ಮೆರೆವುವೀಗಳಾಱಿಡಿನೆವದಿಂ ||೧೩೯

ನಿನ್ನಯ ಚಾಗಮುಂ ಸಿರಿಯುಮಾಳ್ತನಮುಂ ದೊರೆವೆತ್ತ ವ್ಯೆಮೆ
ಯುಂ | ಮನ್ನಣೆಯುಂ ಪೊದಱ್ದ ಜಸಮುಂ ಬಗೆಯುಂ ಚಲಮುಂ ನೆ ಗ
ೞ್ತೆಯುಂ|| ನನ್ನಿಯುಮಾರ್ಗಮಚ್ಚರಿಯನಿತ್ತುಪುವೆಮ್ಮೊಡೆಯಂಗವಿಾ
ತೆಱಂ | ಪೊನ್ನದು ಕಮ್ಮಿತಾದ ತೆಱನಲ್ಲವೆ ನಲ್ವಗೆಗೊಂಡೊಡಿರ್ವರುಂ||೧

ಪೊಡವಿಯೊಳಂತಾತನವೊಲ್ |
ಕಡುಬಲ್ಲಿದರಿಲ್ಲ ನಿಮ್ಮೊಳಾತಂ ಕೆಳೆಗೊಂ ||
ಡೊಡೆ ತೀರದುದಿನಿತಿಲ್ಲೀ |
ಗಡೆ ಬಿಡುವುದು ಪೆಱಿಯ ಸೆಱಿಯನಿದು ಲೇಸಲ್ತೇ! ||೧೩೪

ವ|| ಎನಲೊಡನೆ ಬಗೆಯೊಳ್ ಪುಟ್ಟಿದ ಮುಳಸಂ ಪೊಱಪೊಣ್ಮಲೀ
ಯದೆ ಮುಗುಳ್ನಗೆ ನೆಗೆವಿನಂ ಮಾದೇವನಿಂತೆಂದಂ ||೧೩೫

ಬಱಿವಾತನಿನಿಸುಪೊೞ್ತಂ |

ಮೆಱೆವಿನೆಗಂ ಗಱಿಪಲೇಕೆ ನಿನ್ನಯ ಬಗೆಯೊಳ್ ‖
ತಱಿಸಂದಿರ್ದುದನೊರ್ಮೊದ |
ಲಱಿಪದೆ ನಿನ್ನಂತು ನುಡಿವನಾವನುಮೊಳನೇ? ‖೧೮೦

ಉರ್ಕಾಳ್ಗಳಾದೊಡೇಂ ಕೇಳ್ |
ಸೊರ್ಕಾನೆಯ ಕೈಯ ಕರ್ವನಿನಿತುಂ ಸೆಱೆಯಲ್ ‖
ಬರ್ಕಮೆ ಪೆಱಿಯಂ ಬಿಡೆನಂ |
ತಿರ್ಕದು ಮುತ್ತೊಂದು ಕಜ್ಜಮುಳ್ಳೊಡೆ ನುಡಿಯಾ ‖೧೮೧

ಅಱಿಕೆಯ ರೂವಿಲ್ಲದ ನಿ |
ನ್ನೆಱಿಯಂಗುಬ್ಬಟೆಯ ಬೀರಮುಂಟೆಂದುದ್ದಂ ‖
ಜಱುಚಿದೆ ಕೇರಿಲ್ಲದೆ ಕ |
ಣ್ದೆಱೆವಿನೆಗಂ ಬರೆವೆನೆಂಬ ಮರುಳಂ ಪೋಲ್ತೈ ‖೧೮೨

ಕೋಡುವ ಕೂಂಕುವ ಚೆಂದಂ |
ನೋಡಿರೆ ಕಾಳೆಗಕೆ ಬೆಂಬಲಂ ಗಡ! ಪೆಂಡಿರ್ ‖
ಸೂಡುವಲರಂಬು ಗಡ! ಪಿಡಿ |
ದಾಡುವ ಕರ್ಬು ಗಡ! ಬಿಲ್ಲಿದೇನಚ್ಚರಿಯೋ! ‖೧೮೩

ಪಡೆ ಮರವಟ್ಟ ಮಾವು ಗಡ! ಬೆಳ್ಗೊಡೆಯಾಗಸಕೆೞ್ದ ಚಂದಮಂ|
ಗಡ! ಪೊಸಬೆಳ್ದಾವರೆಗಳಾವೆಡೆಯೊಳ್ ನಡೆವಲ್ಲಿ ಪೊಯ್ದ ಪೂ ‖
ಗುಡಿ ಗಡ! ಕೊಂಬುಗೊಂಡುಸಿರದಿರ್ಪ ಬಸಂತನಿವರ್ಕೆ ತಾನೆ ಪೆ |
ರ್ಗಡೆ ಗಡ! ಗೆಲ್ವ ತಕ್ಕಱಿಯಲಾದುದು ನಿಮ್ಮಲರಂಬನೆಂಬನಾ ‖೧೮೪

ಪಿರಿದುಂ ಮಾತಿನೊಳೇನೈ |
ಸರಲಂಗೆ ಪೊಡರ್ಪಿನೇೞ್ಗೆಯುಂಟಾದೊಡೆ ಚೆ ‖

---

೧. ನಾವವನೊಳನೇ. ಗ ‖

ಚ್ಚರದಿಂದೆತ್ತಿಸಿ ತಂದಿ।
ವರ್ಗರ ಬಲ್ಪಂ ಬೞಿಕೆ ನೋಡು ನೀಂ ಕಾಳೆಗದೊಳ್ ॥೧೮೫

ವ॥ ಎಂಬುದುಂ ಕೇಳ್ದು ಮತ್ತಮಾದೂದನಿಂತೆಂದಂ :—॥೧೮೬

ಎನ್ನೊಡೆಯನ ಬಲ್ಪಂ ನೀ।
ನಿನ್ನುಂ ಕಂಡಱಿದುದಿಲ್ಲ ಬಿದಿಯೆಂಬಣ್ಣಂ॥
ಬನ್ನಂಬಟ್ಟುದನಱಿಯನೆ।
ಮುನ್ನಂ ಮೆಯ್ಗಣ್ಣನಱಿಯನೇ ಪೂಡೆಯುಲರಂ॥೧೮೭

ಬಾನೆಡೆಯೊಳ್ ಸುೞಿದಾಡುವ।
ರೇನಱಿಯರೆ ರಕ್ಕಸರ್ಕಳಱಿಯರೆ ದಿಟದಿಂ॥
ಮಾನಿಸರಱಿಯರೆ ಬಾಸುಗಿ।
ತಾನಱಿಯನೆ ಮತ್ತಮಱಿಯದೇ ನೆಲನನಿತುಂ॥೧೮೮

ವ॥ ಅಂತುಮಲ್ಲದೆಯುಂ, ನೀಂ ನಾಲ್ಕೆರಡು ಪಗಲೊಳೆಮ್ಮೊಡೆಯನ ಕೈಯ ನನೆಯ ಕೋಲ ಕಾಲಾಟಮಂ ಕಾಣ್ಬಿರೆನುತೋಲಗಸಾಲೆಯುಂ ಪೊಱಮಟ್ಟು ತುರಿಪದಿಂ ಬಂದು, ಕಂಪುವೊೞಲಂ ಪೊಕ್ಕು, ತೆಱಪುವಾರ್ದು ನನೆವಿಲ್ಲ ಬಲ್ಲಹನಂ ಕಂಡು,—ಕಿತ್ತಡಿ ಪೆಱಿಯಂ ಬಿಡೆನೆಂದು ಕಾಳೆಗವಂ ಮುಂದಿಟ್ಟುಕೊಂಡಿರ್ದಪನೆನಲೊಡನೆ, ನನೆಗಣೆಯಂ ಕೆಲಬಲದ ಪಸಾಯ್ತರ ಮೊಗಮಂ ನೋಡಿ, ಮುಳಿಸಂ ಮುಕ್ಕುಳಿಸಿ, ನಸುನಗೆ ವೆರಸು ಇಂತೆಂದಂ :—॥೧೮೯

ಉಡುವ ಪುಲಿದೊವಲೊ ಕೈಯೊಳ್।
ಪಿಡಿದಾಲಾಗುಳದ ಕೋಲೊ ಬಗರಿಗೆಯೋ ಕಂ।
ಜೆಡೆಯೋ ಪೂಸುವ ಬೂದಿಯೊ।
ಬಡಗೊರವಂಗೇಕೆ ತನಗೆ ಕಾಗುವ ಬೆಸನಂ॥೧೯೦

ಎನ್ನೆಡಗೈಯುಗುರ್ವಿಸುವ ಕರ್ಬಿನ ಬಿಲ್ಗೊನೆಯಲ್ಲಿ ಬಾರದಿ|
ರ್ಪನ್ನೆಗಮೆನ್ನ ಜೇವೊಡೆಯು ಬಲ್ಲುಲಿ ನಾಲ್ದೆಸೆಯಂ ಪಳಂಚದಿ||
ರ್ಪನ್ನೆಗಮೆನ್ನ ಪೂಗಣೆಗಳೋವದೆ ಬೆನ್ನನೆ ಪೋಗಿ ನಾಂಟದಿ |
ರ್ಪನ್ನೆಗಮುಂಟು ತನ್ನ ಕಡುಸೊರ್ಕು ಒಱುಕ್ಕದು ಪಾಱಿ ಪೋಗದೇ?||

ಕಡಲೊಳ್ ಮುಗ್ಗುರೆದಿರ್ದೊಡಂ ಪೊಡವಿಯೊಳ್ ಪೊಕ್ಕಿರ್ದೊಡಂ ಬೆಟ್ಟದೊಳ್ | ನಡೆದೇಱಿರ್ದೊಡಮುಳ್ಕುತುಂ ದೆಸೆಗಳೊಳ್ ಬಳ್ಕುತ್ತಡಂಗಿರ್ದೊಡಂ || ಕಡುಪಿಂದೊರ್ವಯೆ ಪೂವಿನಂಬದಟರಂ ಮೆಯ್ದಾಗಿ ನೋಯಿಪ್ಪುದೆಂ |ದೊಡೆ ಕೇಳೆನ್ನಯ ಬಾರಿಯೊಳ್ ತಿಸುಳ ತಾನಿನ್ನೆತ್ತ ಪೋಗಿರ್ದಪಂ||೧೫

ಅದಟನಳುರ್ಕೆಯಂ ಕಿಡಿಸಲಾಂಬರಮೇ? ತನಗೊಂದು ಕರ್ಬುಸಾ|
ಲದೆ? ಮಱಿದುಂಬಿ ಸಾಲದೆ? ಪಸುರ್ವಡಿ ಸಾಲದೆ? ಬಂದ ಮಾವು ಸಾ||
ಲದೆ? ಸುಱಿವಂಚೆ ಸಾಲದೆಳಗಾಂಗುಱಿ ಸಾಲದೆ? ಕಾಯ್ತುತೆಂಗು ಸಾ|
ಲದೆ? ಪೊಸನೀಱವೆಣ್ಣುನುಡಿ ಸಾಲದೆ? ತೆಂಕಣ ಗಾಳಿ ಸಾಲದೇ?||೧೬

ವ|| ಎಂದು ಗದ್ದುಗೆವೊಯ್ದು ಕಣ್ಣ ಕೆಂಪು ಕಿಸುಸಂಜೆಯಂ ಪಸರಿಸೆ ದೆಸೆದೆಸೆಗೆ ಮಸಗಿ ನಿಸ್ಸಾಳಮಂ ಸೂಱೈಸಲ್ವೇೞ್ದಾಗಳ್||೧೭

ಮಾಣದೆ ಸಿಳ್ಳವುಂ ಪೊಣರ್ವರಾಯರ ತಕ್ಕಡಿಗಾಱೆ ಬಳ್ಕನೀ |
ದಾರ್ಣಮನಂಟುಗೊಂಡದಟರಾಗಳೆ ಬಾಯ್ವಿಡೆ ಸೊರ್ಕನಿಂದೆ ಕ||
ಣ್ಗಾಣದ ಬೀರರುಗ್ಗಡಿಸೆ ಬಗ್ಗಿಪ ಕೋಗಿಲೆಯೆಂಬ ಪೊಯ್ವ ನಿ|
ಸ್ಸಾಣದ ಬಲ್ಸರಂ ಕಿವಿಯ ಬಾನೆಡೆಯಂ ಬಳಸಿತ್ತು ಬೇಗದಿಂ ||೧೮

ಅದಟನಳುರ್ಕೆಯಂ ಕಿಡಿಸಿ ಬಿಂಕಮನಗ್ಗಿಸಿಯೆನ್ನ ಕೋಲ್ಗಳಂ|
ಸದೆದರೆವೆಣ್ಣನಂ ಬಿಡದೆ ಮಾಡಿ ಕಡಂಗಿ ನೆಲಂಗಳೊಳ್ ಸಮಂ||

೧. ಬಟ್ಟದಿ| ಟ್ಟಡೆಯೊಳ್ಗಟ್ಟದೊಳಿರ್ದೊಡಂ ದೆಸೆ. ಕ||

ತೊಱವಿಸಿ ಪೆರ್ಮೆಯುಂ ಸೆೞೆದು ಬಲ್ಮೆಯುನಿೞ್ಕೆಗೊಂಡು ಬೇಗದಿಂ ।
ಕದಕದಪಂ ತೊಡರ್ಚೆಯೆಳೆದೇರನನೋಡಿಪೆನೆಂದು ಪೂಸರಂ ॥೧೯

ವ ॥ ಅಂತು ತೊಟ್ಟನೆ ಪಳಂಚಲೆದು ತನ್ನ ಮನದನ್ನರಪ್ಪ ಬಸಂತ ಮಲ್ಲೆಲರ್ಗಳೆಂಬ ಕೆಳೆಯರೊಡನೆ ಇಂದು ಪಡೆಯೆಲ್ಲಮುಂ ಪಲವುಂ ಸನ್ನಣದಿಂ ಬರಲಿಮೆಂದು ಪೇೞ್; ಕಮ್ಮಂಗಣೆಯುನ ನುಡಿಯನಾಲಿಸಿ ಹಸಾದವಪಿಟ್ಟು ಸುಗ್ಗಿಯುಮಾತೆಂಗಾಳಿಯುಮಿರ್ವರುಂ ಸಜ್ಜುವಂ ಪಡೆದು ಚಾವಂದದ ದೞಕಂ ಸೆಲವಿತ್ತೊಡಗೊಂಡು ಬರೆಯಾಗಳ್ ಪಲವೆಡೆಯ ಕಡೆಯ ಬಾಡಗಳ ಬನಂಗಳೊಳ್ ತಾಣಂದರವಾಗಿರ್ಪ ಕೆಂಗಣ್ಣಕ್ಕಿಯಲರ್ವಕ್ಕಿ ಕನ್ನಡವಕ್ಕಿ ಪೊಱರ್ವಕ್ಕಿ ಮೊದಲಾದ ದಟ್ಟಯ ಕೂಱಾಳ್ಗಳುಂ ತಂತಮ್ಮ ಪಡೆವೆರಸು ಬಂದು ಕಾಣ್ಬುದುಮವರಂ ಮನ್ನಿಸಿ ನಾಲ್ಕುಂ ತೆಱದ ಪುಸಿವಡೆಯುಂ ಬಿಜ್ಜೆಯಿಂ ಪುಟ್ಟಿಸಿ ಮುಂಗುಡಿಯೊಳ್ ನಡೆವಂತೆ ಬೆಸಸಿ ಕಣ್ಗೆಂಬಾಗಿರೆ ಬೀರಪಸದನಂಗೆಯ್ವು ॥೧೯

ಪಲವುಂ ಮೇಳದ ಬೀರರ್ ।
ಕೆಲದೊಳ್ ಬರೆ ತುೞುಗಿ ಪಿಡಿದ ಬೆಳ್ಗೊಡೆ ಚೆಲ್ವಂ ॥
ಗೆಲೆ ತನ್ನರಮನೆಯೊಳ್ ಸಿರಿ ।
ನಲವಿಂ ನೆಲಸಿರ್ಪ ಪೊೞ್ತನೊಳ್ ಪೊಱಮಟ್ಟಂ ॥೧೯

ಸೊಗಯಿಪ ತಳಿರ್ದೋ*ರಣಮುಂ ।
ನುಗುಳುತ್ತುಂ ಪಲರ ಪರಕೆಯುಂ ಕೈಕೊಳುತುಂ ॥
ಪೊ*ಗಟ್ವವರಂ ಮನ್ನಿಸುತುಂ ।
ಬಗೆವುಗೆ ಪೊಱವೊೞಲನೆಯ್ದಿದಂ ನನೆಗಣೆಯಂ ॥೧೯

ಮೊಗಸಾಲೆ ಚಂಪೆಯುಂ ಚೌ ।

---

೧. ವಿರವತ್ತುಂ. ಗ॥

ಕಿಗೆ ಮೆಱೆದಿರೆ ಹರಿಸದಿಂದೆ ಬೀಡಂ ಬಿಟ್ಟಾ ||
ಪಗಲಂ ಕಳೆದಂದಿನ ಮಱು |
ವಗಲಂ ನಡೆದೆತ್ತಿ ಬರುತುಮಿರ್ದಂ ಕಾವಂ ||೧೯೯

ವ || ಆಗಳ್ ||೨೦೦

ಅರಗಿಳಿವಿಂಡು ಪಾರುವದ ಮೋಹರಮಾಱಡಿವಿಂಡು ಬಿಲ್ಲ ಬೀ |
ರರ ಪಡೆ ಕೊಂಚೆವಿಂಡು ಪ[illegible]ದೊಡ್ಡ*ಮುಳ್ಳಕ್ಕಿವಿಂಡು ಮೊ ||
ಯ್ವೊರಸುವ ಕೊಂತಗಾಱರಣಿ [illegible] ವಂದು ವಸಂತನೊಲ್ದು ಸಂ |
ವರಣೆಯನೆಸ್ದು [illegible] ತಳಿವಾಗಿ[illegible]ದಂ ನನೆವಿಲ್ಲ ಬೀರನಾ ||೨೦೧

ವ|| ಅಂತೊಯ್ಯನೆ ಮುಂದೆ ಮೋಹರಂಬಿಡದು ತಳರ್ವ ಪುಸಿವ ಡೆಯುಲ್ಲಿ ||೨೦೨

ಗಲ್ಲದ ಸೋರ್ಕುನೀರ ಪೊನಲಿಂ ನೆಲೆವೆರ್ಚಿ ಕಡಲ್ ತುಳುಂಕೆ ಬೆ|
ಟ್ಟೆಲ್ಲಮನೌಂಕುವಂತಿಡುವ ಕಾಲ್ವೊಱೆಯಿಂ ನೆಲನಾೞೆ ಬೇಗದಿಂ ||
ನೆಲ್ಲಿಯ ಕಾಯ್ಗಳಂ ಬಡಿಗೆ ಕೊಂಡುಪ್ರೊಲೆತ್ತಿದ ತೋರಹತ್ತದಿಂ |
ಜಲ್ಲನೆ ತುಂಬಿಗಳ್ ಕೆದಱೆ ಬಂದುವು ಬಿಂಕದಸಂಕದಾನೆಗಳ್ ||೨೦೩

ತೊಳಗುವ ಪೊನ್ನ ಪಲ್ಲಣದ ನುಣ್ಗೆಳಗಾಗಸಮಂ ಮುಸುಂಕೆ ಪ|
ಜ್ಜಳಿಸುವ ಪಕ್ಕರಕ್ಕೆಗಳ ಗೆಜ್ಜೆಯ ಬಲ್ಲುಲಿ ಸೀಳ್ದು ದಿಕ್ಕಿನೊಳ್ ||
ಬಳಸೆ ಕೊಡಂಕೆಯೊಳ್ ಪ್ರೊ[illegible]ಗಾಳಿಯ ಕೋೞ್ಗೆ ಬೆಟ್ಟುಗಳ್
ತಳರೆ ಪೊಗೞ್ತೆಯಂ ತಳೆದ ತೇಜಿಯ ಥಟ್ಟು ತೆರಳ್ದುದೆತ್ತಲುಂ ||೨೦೪

ಪೂಡಿದ ವಾರುವಂಗಳ್ ತೆರಳ್ಕೆಗೆ ನೇಸಱ ತೇರ ತೇಜಿಗಳ್ |
ಪಾಡೞಿದಿರ್ಪಿನಂ ಪರಿವ ಗಾಲಿಯ ಕೋೞ್ಗೆ ಕೆಳರ್ತುವ ಬೆಟ್ಟುಗಳ್ ||
ಕೂಡೆ ಸಡಿಲ್ವಿನಂ ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ |

---

೧. ಆಗಳೊ. ಕ|| ೨. ಘಲ್ಲನೆ ತುಂಬಿಯುಂ. ಗ||

ಕೋಡುವಿನಂಕಡಂಗಿ ಪರಿತ[illegible]ಪ್ರ[illegible]ರ್ಯುತ್ತೇರ್ಗಳೋಳಿಯಿಂ||
ಸಿಡಿಲ ಪೊಡೆಪನೇಱುಸುವ ಸಿಂಗಮನಂಜಿಪ ರಕ್ಕಸರ್ಕಳಂ|
ನಡುಗಿಪ ಮಾರಿಯುಂ ಪೊಸದುಮುಕ್ಕುವ ಮಿಳ್ತುವನೊತ್ತಿಸೊರ್ಕಿನಿಂ||
ಪಿಡಿವ ಕಡಂಗಿ ಸಿಂದ ಜವನಂ ಮುಱಿದಿಕ್ಕುವ ತಕ್ಕನಾಂತು ಮುಂ|
ಗುಡಿಯೊಳ್ ಬಂದುದೆಂದು ತುಱುಲಾಳ್ಗಳ ಬಲ್ಲಣಿ ಗೆಲ್ಲವೆಂಬಿನಂ||೨೦೪

ಕುದುರೆಯ ಘಟ್ಟುಗಳ್ ನೆರೆದ ಬಲ್ದೆರೆಯುಂ ಪಿಡಿದಿರ್ದ ಬಾಳ್ಗಳು|
ಣ್ಮಿದ ನಿಡುವಾಳೆಯುಂ ಬಿಳಿಯ ಸತ್ತಿಗೆಗಳ್ ನೊರೆವಿಂಡನಾನೆಗಳ್||
ಕೆದಱದೆ ಪಂತಿಗೊಂಡ ನೆಗಱಂ ಪೊಸತೇರ್ ಪಡಗಂ ನೆಗೞ್ಬೆ ಪೆ|
ರ್ಚಿದ ಕಡಲೆಂಬಿನಿಂ ಮಸಗಿ ಬಂದುದು [illegible] ಕರ್ಬುವಿಲ್ಲನಾ||

ವ|| ಅಂತು ಬಡಂಗುಪಡೆ[illegible] ಪ್ರಸಿವ[illegible] ಪೆಱಗೆ ಪಱಿಯ ಪಾಡಿಯುಂ ಕೂಡಿಕೊಂ[illegible]||೨೦೫

ಮಿಳಿರ್ವ* ಪೊಸದಳಿರ ಪೞಯುಗೆ|
ಗಿಳಿಗಳ್ ಪೊಱೆದರ್ದ ಕುದುರೆ ತೆಂಗಾಳಿಯ ಕ||
ಣ್ಗೊಳೆ ತೇರೆಸಗುವನೆನೆ ಬಂ|
ದೆಳಮಾವಿನ ತೇರನೇಱಿ ನಡೆದಂ ಕಾವಂ||೨೦೬

ತರದಿಂದೆತ್ತಿದ ಕಂದಾ|
ವರೆಗಳ್ ಕೆಂಗೊಡೆಗಳಂದಮಂ ಪಡೆವಿನಮಾಂ||
ತರಸಂಚೆಯೆಂಬ ಸಾವಂ|
ತರ ಬಳಗಂ ಬಳಸೆ ಬಂದನಂದು ಬಸಂತಂ||೨೦೭

ನನೆಯೆಸಳಂದವಾದ ಗುಱಿಮುಂ ಪೊಳೆಯುತ್ತಿರೆ ನೀಳ್ಪುವೆತ್ತಪೂ|
ವಿನ ಪೊಸಟೆಕ್ಕೆಯುಂ ಮಿಳಿರೆ ಪಕ್ಕದ ಕೋಗಿಲೆಯೆಂಬ ಗಂಟೆಗಳ್||

---

೧. ಕವಿತಂದು ಕ||  ೨. ತೇರ್ಕೆಲದಾಳ್ಗಳೋಳಿಯಿಂ. ಗ||

ದನಿಗುಡೆ ಕೈಯು ಕೋೞ್ಗೆ ಕಡುಗೂರ[೧]ದವರ್ ದೆಸೆಯುತ್ತ ಚೆಲ್ಲೆ ಮೆ ।
ಲ್ಲನೆ ನಡೆತಂದುವಂದು ಪೊಸವೂವೆನಿಪುಗ್ಗಡದಗ್ಗದಾನೆಗಳ್ ॥ ೨೧೧

ಕೆಂದಳಿರ ಪಕ್ಕರಕ್ಕೆಗ ।
ಳಂದಂಬಡೆದೆಸೆವ ಪಲ್ಲಣಂಗಳ ಸೊಂಪುಂ ॥
ಸಂದಿಸೆ ನೀಳ್ಪಂ ನಡೆದುದು ।
ಸಂದರಗಿಳಿಯೆಂಬ ಕುದುರೆಗಳ ದಟವೆತ್ತಂ ॥ ೨೧೨

ಮಿನುಗುವ ಕೊಂಬಿನಚ್ಚುಕಿಱುಗೊಂಬಿನ ತಳ್ತರಗೀಲ್ ಕವಲ್ತಕೊಂ।
ಬಿನ ಮಡವಡ್ಡವಂದ ನಳಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂ ॥
ಬಿನ ಬಳೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆ।
ಲ್ವೆನೆ ನಡೆತಂದುವಂದಸುಗೆಯೆಂಬ ನೆಗೞ್ತೆಯ ತೇರ್ಗಳೆತ್ತಲುಂ ॥

ಕಿಱುಮುಗುಳ ಗೆಜ್ಜೆಯಿಂದಂ ।
ಮಿಱುಗುವ ಕೆಂದಳಿರ ಹರಿಗೆ ಬಗೆಗೊಳೆ ಬಂದ ॥
ತ್ತುಱದೆ ಮಱಿಗೋಗಿಲೆಗಳೆಂ ।
ಬಱಿಕೆಯ ಪೆಸರ್ವೆತ್ತ ಹರಿಗೆಕಾಱರ ತಂಡಂ ॥ ೨೧೪

ಪಿಡಿದಲರ್ವಿಲ್ಲುಂ ಮೆಲ್ಲಸ ।
ಳುಡೆದೊವಲುಂ ಮಿಸುಪ ನನೆಯ ಮೊನೆಯಂಬುಂ ನೇ ॥
ರ್ಪಡೆ ಮೇಲೆ ಮೇಲೆ ನಡೆದುದು ।
ಗಡಣದೆ ಮಱಿದುಂಬಿಯೆಂಬ ಬಿಲ್ಲಣಿಬೀರರ್ ॥ ೨೧೫

ಕಡುನಿಮಿರ್ದುರ್ ಪೊಳೆವ ಪೊಸಪೂ ।
ಗುಡಿಯೆಂಬುಗ್ಗಳಿಕೆವಡೆದ ಸಬಳಮನೊಲವಿಂ ॥
ಪಿಡಿದು ಬರುತಿರ್ದುದೆತ್ತಂ ।

೧. ಗೂರವದೇಸಿಯುದೆತ್ತ. ಕ||, ಗೂರದಪಂದೆಸೆಯುತ್ತ. ಗ||

ಕಡುಸೊರ್ಕಿದ ತುಂಬಿಯೆಂಬ ಡೊಂಕಣಿಕಾಱರ್ ॥ ೨೧೩

ವ॥ ಅಂತು ನಡೆತರ್ಪ ಪಡೆವೆರಸು ನಿಚ್ಚವಯಣಂ ಬರುತಿರ್ಪಾಗಳ್; ಪಲವುಂ ಪರಿಯ ಪಕ್ಕಿಗಳ ಪೆರ್ಚಿದ ಸರಂಗಳಿಂ ಪರಣಂಬಡೆದಂತೆ ಪರಿವಡೆದು ತಿಂತಿಣಿವಡೆದ ಪೇರಡವಿಯೊಳ್ ಪೊಗಲ್ವೆತ್ತು ॥ ೨೧೪

(ಉತ್ಸಾಹ ವೃತ್ತಂ)

ತಱಗಿ ನಡೆವ ಮುಗಿಲ ನಡುವೆ ಪೊಳೆವ ಮಿಂಚಿದೆಂಬಿನಂ ।
ಮಿಱುಪ ತೆರೆಗಳೆಡೆಗಳೊಳಗೆ ಸುೞಿವ ಮೀನ್ಗಳಾವಗಂ ॥
ಮೆಱೆವ, ತೊಱೆಯ, ತಡಿಯ, ತಳಿರ ಮನೆಗಳಲ್ಲಿ, ನಿಚ್ಚಮುಂ ।
ಬಱಿದೆ, ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಣ್ದಿರಿಂ ॥ ೨೧೫

ವ॥ ಗಾಡಿವಡೆದ ಕಾಡಂ ಪಿಂದಿಕ್ಕಿ ಮೆಲ್ಲಮೆಲ್ಲನೆ ನಡೆವಾಗಳ್ ॥

ಕಟ್ಟಿದ ತಂತಿಯಂ ಮಿಡಿದು ಗೊಂದಣದಿಂದರುಹಂತನೇೞ್ಗೆಯಂ ।
ನೆಟ್ಟನೆ ಪಾಡಿ ಸೋಲಿಸುವ ಸಗ್ಗದ ಪೆಣ್ದಿರ ನುಣ್ಚರಕ್ಕೆ ಮೆ ॥
ಯ್ಗೆಟ್ಟೆಳವಲ್ಲಿಗಳ್ ಪಲವುಮಾಲಿಸೆ ಮೆಯ್ಸಿರಿವೆತ್ತ ತಪ್ಪಲಿಂ ।
ಬೆಟ್ಟಮದೊಂದು ದಿಟ್ಟಗೆಡೆಯಾದುದು ತೊಟ್ಟನೆ ಕರ್ಪುವಿಲ್ಲನಾ ॥ ೨೨

ಅಂತು ನೆಗೞ್ದರ್ದ ಬೆಟ್ಟಂ ।
ಸಂತಸದಿಂ ನಿಂದು ನೋಡುತಿರೆ ಬಿನ್ನಪವೆಂ ॥
ದಿಂತೆಂದಂ ಕೈಮುಗಿದು ಬ ।
ಸಂತಂ ಜತಿಯೊರ್ವನಿಲ್ಲಿ ನೆಲಸದೆ ಮಾಣಂ ॥ ೨೨೧

ವ॥ ಎಂಬನ್ನೆಗಂ ॥ ೨೨೨

ಕೊಲ್ಲದುದೆ ದಿಟದಿನಱನೆಂ ।
ದೆಲ್ಲಾ ಪರಿಯಿಂದೆ ಪೇೞ್ದ ಪಿರಿಯರ ನುಡಿಯಂ ॥

೧. ಪೊ॥ ಪುಗೆರಳವಲ್ಲಿ. ಗ॥

ಬಲ್ಲಿತೆನೆ ನಂಬಿ ಬೇಂಟೆಯು।
ನೊಲ್ಲದೆ ಬಿಟ್ಟರ್ದ ಬಿಯದರೊಪ್ಪಿದರದಱೊಳ್ ॥೨೩॥
ಮಡುಗಳೊಳಗಲರ್ವ* ಪೂವಂ।
ಕಡುನಲವಿಂ ತಿಱಿದು ಬೇಗದಿಂ ಸವಣನ ಮೆ॥
ಲ್ಲಡಿಗೆ ತಲೆದುಡಿಗೆವಾಡುವ।
ಪಿಡಿಗಳ್ ನೆಗೞ್ದಿ*ರ್ದವದಱ ತೆಟ್ಟಿಲ ಬನದೊಳ್ ॥೨೪॥
ತೊಲಗದೆ ಗೆಡೆಗೊಂಡಿರ್ದುವು।
ಸಲೆ ಮುಳಿಸಂ ಬಿಟ್ಟು ಸೋಗೆಯುಂ ಪಾವುಗಳುಂ॥
ಪುಲಿಯುಂ ಮಱಿವುಲ್ಲೆಗಳುಂ।
ಕಲಿಸಿಂಗಮುಮಾನೆಯುಂ ಕರಂ ನಲವಿಂದಂ ॥೨೫॥

ವ॥ ಅಂತು ಮೈಮೆವಡೆದ ಬೆಟ್ಟದ ಮೇಲೆ ಕೈಯೆತ್ತಿ ಪಲರುಂ ಜತಿಗಳ್ ತವಸಿಂಗೊಳಗಾಗಿ ॥೨೬॥

ಬಗೆ ನೊಸಲಲ್ಲಿ ಕೂಡೆ ನಿಲೆ ತಪ್ಪದೆ ಮೂಗಿನ ಚೌ[1]ಕದಲ್ಲಿ ದಿ।
ಟ್ಟಿಗಳಿರೆ ಮೆಯ್ಯುಮಣ್ ಕೊರಲ್ಗೆ* ಪುತ್ತಿಡೆ ಪರ್ಬಿದ ಬಳ್ಳಿ ಸುತ್ತಲುಂ॥
ಸೊಗಯಿಸೆ ಕೈಯನಿಕ್ಕಿ ಮಿಗೆ ತನ್ನನೆ ತಾನೊಲವಿಂದೆ ಜಾನಿಸು।
ತ್ತಗಲದೆ ನಿಂದನೊರ್ವ ಸವಣಂ ಬಗೆಗೊಳ್ವೆ[3]ಱತಟ್ಟತೆಂಬಿನಂ ॥೨೭॥

ವ॥ ಅವರಂ ಭೋಂಕನೆ ಕಟ್ಟದಿರೊಳ್ ಕಂಡು ಕಿಡಿಕಿಡಿಯಾಗಿ ಕರ್ವುವಿಲ್ಲನಿಂತೆಂದಂ:—ಇನ್ನೆಗಮೆಸಗಿದಿರಾಗಿ ಮಲೆದು ಪೋಗದೆ ನಿಲ್ವ ತವಸಿಗಳನೊರ್ವರುಮಂ ಕನಸಿನೊಳಂ ಕಂಡೆ[4]ನಿಲ್ಲ. ಸವಣನೊರ್ವನೆ ತೊಲಗದಿದಿರಾಗಿ ನಿಂದಂ. ಇದರ್ಕೆ ತಕ್ಕುದಂ ಮಾೞ್ಪೆನೆಂದು ಕರ್ವುವಿಲ್ಗೆ ಕೈಯಂ ನೀಡೆ ಬಸಂತನಿಂತೆಂದಂ:— ॥೨೮॥

೧. ಕೌತಲಲ್ಲಿ. ಕ ॥
೨. ಮೆಯ್ಯೊಳಚ್ಚಿಸಿಲವುತ್ತಿರೆ. ಕ ॥
೩. ಳ್ವೆರವೇಟದೆಂಬಿನಂ. ॥ ಗ.
೪. ಕಂಡುದಿಲ್ಲ. ಗ ॥

ತನಗೆ ಸವನಪ್ಪವಂ ಪೊಣ |
*ರ್ದನೆ ಕಾದುವುದಜ್ಞನಪ್ಪವಂಗೆಱಗುವುದೆಂ ||
ಬಿನಿತೆ ವಲಮುರಸುಗಾದೆಗ |
ಳನುವಂ ನೀನಱಿದು ಬಿಲ್ಗೆ ಕೈನೀಡುವರೇ? ||೨೨೦
ಪೆಱವಗೆಗಳಾಱುಮುಂ ಗೆ |
ಲ್ದಳವಿಂ ಕೈಯಿಕ್ಕಿ ನಿಂದ ಕಲಿಯೆಂದುಂ ತ ||
ನ್ನೊಳಗುಂ ಪೊಱಗುಂ ತೋಱದ |
ಬಳಿಯಂಗೆಱಗಿರ್ದು ಬಾೞ್ವುದೀಮೂಲೋಕಂ || ೨೪೧
ಕೆಱಕುಳನೆಂದೇೞಿಸಲೀ | ೪
ತೆಱನಲ್ಲವೆ ಮುಂದೆ ನಿಂದ ಸವಣನ ರೂಪೇ ||
ತಱ ಮಾತೊ! ಗಂಡುತನವುಂ |
ಮೆಱೆ ತಿಸುಳಯೊಳೆಱಗು ಪಿಱಿಯುವರ್ಗೆ ಳ್ಯೆಡೆಯಾ|| ೨೪೨

ವ|| ಎನೆ ಗದಗದನೆ ನಡುಗಿ ಮುಂದೆ ತಿಸುಳಯಂ ಗೆಲ್ವುದರ್ಕೆ ಮುಡಿಗಿಕ್ಕುವಂತೆ ನಿಡುಗೈಗಳಂ ಮುಡಿಗಿಕ್ಕಿ ನಡೆದು ಅಂತುಮಲ್ಲದೆಯುಂ|| ೨

ಉಱದಱೆಂದಮಾತವಸಿಯುಂ ಮುಳದೆಚ್ಚೊಡೆ ಕರ್ವುವಿಲ್ಲುತಾಂ |
ಮುಱಿಯದೆ ಪೂವಿನಂಬು ಕರಿಕೇಱದೆ ತುಂಬಿಯ ನಾರಿ ಬೇಗದಿಂ ||
ಪಱಿಯದೆ ತನ್ನ ನಚ್ಚಿನೆಲರೊಯ್ಯನೆ ಜಾಱದೆ ಬಂದ ಮಾವು ಬೀ |
ತೊಱಗದೆ ಗಂಡುಗೋಗಿಲೆಯಸೊರ್ಕೊಳಸೋಱದೆ ಸ್ಯೆತೆ ಪೋಕುಮೇ॥

ವ|| ಎಂದು ಬಗೆವರ ಬಗೆ ಹಿಂದುಱಿಯೆ ತಳರ್ದು ಬನಂಬಿಡಿದು ಕಟ್ಟುದ್ದಮಾಗಿ ಬೆಳೆದ ಬಿದಿರ ಕೊನೆಯ ಕೋಳ್ಗೆ ಪಱಿವಱಿಯಾದ ಮುಗಿಲ ಪೊಱೆಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದ

೧. ದಳವಗ್ಗೆ. ಗ ||  ೨. ಬಗೆಗಿಂತೆಂದು ತಿಳಿದ್ಕಳರ್ದು ಬನ್ನಂ. ಗ ||

ಲೆಂದು ಬಂದು ನುಂಗಲಂಗೈಸುವ ಜಾದಗೆಯ ಮಱಿಗಳುಮಂ, ಬೆಂಗ ದಿರ್ಗಂ ತಣ್ಗದಿರ್ಗಂ ತೆಱಪುಗುಡದ ಮರದುಱುಗಲ ಕೞ್ತಲೆಯುಂ ಕಾರಿ ರುಳ್ಗೆತ್ತು ಸುೞಿಯುಲನುಗೆಯ್ವ ಗೂಗೆಗಳುಮಂ, ತನಿವಣ್ಣ ಗೊಂಚಲಿಂ ಮಿಂಚುವಡೆದ ಮೇಲ್ಮರನನಡರ್ವ ಕೋಡಗಂಗಳ ಬಳ್ಳವಾಲಮನೆಳ ನಾಗರೆಂದು ಸೆಱೆದುಕೆಡಪಿ ಕಡಿದೀಡಾಡಲವ್ವಳಿಸುವ ಮುದಿಮುಂಗುಲಿ ಗಳುಮಂ, ಕಡವೆ ತುಱಿದು ಕದಡಿದೆಡೆಯೊಳಲೆ ಕೞಲ್ದು ಕೆಡೆದ ತೋರ ಗೊಂಬುಗಳಂ ಪೆರ್ವಾವೆಂದು ಪೊರ್ದಲಂಜಿ ಗೆಂಟಱೊಳ್ ತೂಗಿ ನೋಡಿ ಪೆೞಕಾಲೊಳೋಡುವ ಕಿಱುನರಿಗಳುಮಂ, ಈಡಿಱಿವ ಕಾಡಾ ನೆಗಳ ಕೋಡ ಪೊಯ್಴್ಲಿಂದುದಿರ್ದ್ದತ್ತಲುಂ ಪರೆದ ಗುರುಗುಂಜಿಯುಂ ನೋಡಿ ಕೆಂಬರಲೆಂದು ಬಗೆದು ಬೇಗದಿಂದಾಯಲೆಂದುಜ್ಜುಗಿಪ ಬಿಯ ದರೆಳವೆಣ್ಡಿರುಮಂ, ಬಿಱುಗಾಳಿಯ ಪೊಯ್಴್ಲಿಂನೆಗೆದೊಗೆದ ಬಿದಿರ ಬಲ್ಲು ಲಿಯಿಂ ಬೇಡರ ಬಲ್ಲುಲಿಯಿನೆಲ್ಲಿಯುಂ ನಿಲ್ಲದೆ ತಲ್ಲಣದಿನೋಡಲೊಡ ರ್ಚುವೆಳವುಲ್ಲೆಗಳುಮಂ, ಸುೞಿಗಾಳಿಗೆ ಸುೞಿಯೆ ನೆಗೆದು ಪಾರ್ವತೞ ಗೆಲೆಯ ತುಱುಗಲಂ ಕಿಱುವಕ್ಕಿವಿಂಡೆಂದು ಕೋೞಿಂಡುಗಳಂ ಮಱಗೊಂಡು ಮಿಡಿವಿಲ್ಲೊಳಸಲೆಸಗಿ ಪಱುಗುವ ತುಱುಗಾವ ಕಿಱುಕುಳದ ಕೆಳೆಯ ರುಮಂ ನೋಡುತ್ತುಂ ನಿಚ್ಚವಯಣದಿಂ ಬರೆವರೆ ॥ ೨೩ ॥

(ಮಾಲಿನೀ ವೃತ್ತಂ)

ಬಿಡದೆಸಪೆಲರಿಂದಂ ಪೊಣ್ಮುತಿರ್ಪಚ್ಚಗಂಪಂ ।
ಪಿಡಿದಲರ್ಗಳ* ಜೊಂಪಂ ಜೋಲ್ದು ಚೆಲ್ವಾಗೆ ಬಿಣ್ಪಿಂ ॥
ದಿಡಿದ ಮರಗಳಂದಂ ಬೆಳ್ವೆಟ್ಟಕ್ಕೆ ನಿಚ್ಚಂ ।
ಪಡಿಯೆನಿಸುವುದೆತ್ತಂ ರನ್ನಗಲ್ಲೆಂಬ ಬೆಟ್ಟಂ ॥ ೨೪ ॥

೧. ಡಲಡಹಡಿಸುವ. ಖ||
೨. ವುಱುಂಗುಱ. ಗ|| ಖ||
೩. ಕರದದೆಡೆಯೊಳ್. ಖ||
೪. ಕೇರುವರಿಗ, ಖ||, ಕಿರುಕುಳರ. ಗ||

ಹರಿಸದೆ ಕೂಡುವ ಬಿಜ್ಜೋ ।
ದರಿಯರ ಕೊರಲುಲಿಗಳಿಂದಮುಂತಾಬೆಟ್ಟಂ ॥
ಬಿರಯಿಗಳ ಮೊತ್ತಮುಂ ಜ ।
ಪ್ಪರಿಪಂತಿರೆ ಸಾರ್ದು ನೋಡಿದಂ ನನೆಗಣೆಯಂ ॥ ೨೩

ನೋೞ್ಪರ ಕಣ್ಗಚ್ಚರಿಯುಂ ।
ಮಾೞ್ಪವೊಲಾಗಸಮನಣೆವ ಕೋಡುಂಗಲ್ಲಿಂ ॥
ನೀಳ್ಪಂ ತಳೆದಾಬೆಟ್ಟದ ।
ತಾೞ್ಪುದಿದ ಬನಂಗಳಲ್ಲಿ ಬೀಡಂ ಬಿಟ್ಟಂ ॥ ೨೪

ವ ॥ ಆಗಳೆಡೆಗಿಱಿದ ಪೂಗುಡಿಯ ಗುಡಿಗಳೊಳಂ, ನೆಗೆದ ಸುರಹೊನ್ನೆಯ ಮೊಗಸಾಲೆಯೊಳಂ, ಮಡಲ್ಗೊಂಡ ಮಲ್ಲಿಗೆಯ ಮಂಡವಿಗಳೊಳಂ, ಸಂಪಗೆಯ ಜೊಂಪದ ಚಂಪೆಯದೊಳಂ, ಕಂಪನಪ್ಪಿದಿರವಂತಿಯ ಕಾವಣಂಗಳೊಳಂ, ಗಾಡಿವಡೆದ ಬಕುಳದ ಗೂಡಾರದೊಳಂ, ಬೀಗಿ ಪೞಪೞನೆ ಬೆಳೆದ ಬಾೞೆಯ ತಿಮ್ವರಿಯೊಳಂ, ಸೊಂಪಾದ ಪಾದರಿಯ ಚೌಕಿಗೆಗಳೊಳಂ, ಬಿಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸದಿರ್ದುದನ್ನೆಗಮಿತ್ತಲ್ ॥ ೨೫

ಪೂಗಣೆಯನೆತ್ತಿ ಬಂದುದ ।
ನಾಗಳೆ ಸಿವನಱಿದು ನೊಸಲ ಕಣ್ಣಾಯ್ದುವನಂ ॥
ಬೇಗದೆ ನಡೆದವನೊಳ್ ನೀಂ ।
ತಾಗೆನೆ ನಸುನಗುತುಮಾತನಂದಿಂತೆಂದಂ ॥ ೨೬

ನೆಲನಂ ಪೋಗೊದೆಯೆಂಬುದೇಸುಗಿದು ಬೆಟ್ಟಂ ಹಿಟ್ಟುಮಾಡೆಂಬುದೇ।

---

೧. ಬಳ್ವ್ಯಾಳನೆ. ಖ॥ ೨. ಬೀಡಂ ಬಿಟ್ಟು. ಖ॥ ಗ॥ ೩. ಗಣ್ಣಾಯ್ದು. ಖ॥ ಗ॥
೪. ಪೊಗತಿದೆ. ಗ॥ ಪೞದೆ. ಕ॥ ಖ॥ ೫. ನೊಗೆದ ಕ॥ ಖ॥

ನುಲಿದೊಳ್ಪಂ ದೆಸೆಯಾನೆಯಂ ಪಿಡಿದು ಕೋಡಂ ಕಿಱ್ತು ತಾರೆಂಬುದೇ ||
ನೆಲೆ ಪೆರ್ಮಾರಿಯನಾವಗಂ ಪೊಸೆವು ನೀಂ ಮುಕ್ಕೆಂಬುದೇನೆಳ್ಕದೀ |
ಯಲರ್ವಿಲ್ಲಾತನ ಪಾಡಿಯಂ ಕಡುಪಿನಿಂ ತಾಗೆಂಬುದೇಂ ಬೀರಮೋ? || ೨೪

ವ|| ಮತ್ತಮೊರ್ವಂ ಮೂದಲಿಸಿಯಲ್ಲದೆ ತಾಗದ ಮುನ್ನೆಱಗಿದಲ್ಲ ದಿಱಿಯದ ಸಾಱಿದಲ್ಲದೆ ಕೊಲ್ಲದ ಮುಱಿಯಿಱಿದಲ್ಲದೆ ಮೊರೆದೆಸೆಯದ ಪೆಸರಂ ತಳೆದ ಕೂರಾಳಂತೆಂದಂ:— || ೨೪೦

ಕಡುಮುಳಿದೋಡಿ ನಿಂದ ತುಱಿಲಾಳ್ಗಳನಾಂ ತಱಿದೊಕ್ಕಲಿಕ್ಕದಿ|
ರ್ದೊಡೆ ಬಿಡದಾಂತ ಸೂನಿಗೆಯ ಭಂಡಿಗಳಂ ಸಿಡಿಲಂತೆ ಪೊಯ್ಯದಿ ||
ರ್ದೊಡೆ ನಡೆತರ್ಪ ತೇಜಿಗಳನೋವದೆ ಭಂಡಣದಲ್ಲಿ ಸೀಳದಿ |
ರ್ದೊಡೆ ಪೆಸರಾನೆಯಂ ಮುಱಿಯದಿರ್ದೊಡೆ ನಚ್ಚಿನ ನಿನ್ನ ಲೆಂಕನೇ? || ೨೪೧

ಮಿಸುಪ ಸುಲಿಪಲ್ಲ ಬೆಳಗೆ|
ಣ್ದೆಸೆಯಂ ಪರಿದಡರ್ದು ಪೊಳೆವ ಜೊನ್ನದ ಸೊಂಪಂ ||
ಮುಸುಳಿಸೆ ಮತ್ತಮದೊರ್ವಂ|
ಬಿಸುಗಣ್ಣನ ಮುಂದೆ ನಿಂದು ತಾನಿಂತೆಂದಂ || ೨೪೨

ಕೊಂಡಾಡುವ ಕಾಲ್ಗಾಪಿನ|
ಗಂಡರ್ಕಳನುಱಿಸಿ ಕೆದಱಿ ನಿಟಿಲೆನೆ ಮುಱಿವೆಂ ||
ಭಂಡಣದೆಡೆಯೊಳ್ ಬಾಱಿಯ |
ದಿಂಡಂ ಮುಱಿವಂತೆ ಕಾವನಾನೆಯ ಕೊಂಬಂ || ೨೪೩

ವ|| ಮತ್ತಮೊರ್ವಂ ತಕ್ಕಿನ ರಕ್ಕಸರನೊಕ್ಕಲಿಕ್ಕಿದ ಪೆಸರ ಪೇರಱ ಕೆಯೊಳಂತೆಂದಂ:— || ೨೪೪

---

೧. ತಾಯೆಂಬು. ಕ|| ೨. ನಕ್ಕಟೇ. ಗ|| ೩. ಕಳಪಿನಿಂ ತಾರಂ. ಕ||
೪. ಮುನ್ನೆಳನಲ್ಲಡಿದರಿಯಲ್ಲದೆ. ಕ || ಖ || ೫. ಹೆರತೆಗೆಯದ. ಕ || ಖ ||
೬. ಪಿಡಿ. ಕ || ೭. ನೆಟ್ಟಗೆ. ಗ || ೮. ಸರೊಳೊಪ್ಪೆಸರದರಿಕೆಯೊ. ಗ||

ತೊಱೆಯಂ ಪೊಕ್ಕಾದಂ ಮೆ |
ಯ್ಯಱಿಯದೆ ಸೊರ್ಕಾನೆ ಮುಳಿದು ಬೆಳ್ದಾವರೆಯಂ ||
ಮುಱಿವವೊಲಾಕಾಳೆಗದೊೞ್ |
ತಱಿಸಂದೊಳವೊಕ್ಕು ಮುಱಿವೆನಾತನ ಕೊಡೆಯಂ || ೨೪೩

ಬಂದ ಕಡುಗುದುರೆ ಪೊಲದೊೞ್ |
ನಿಂದವರಂ ತಿವಿದುವಕಟ! ನೋಡಿರೆ ತಾನಿಂ ||
ತೆಂದಱಿಯಬಾರದಿದು ಪೊಸ |
ತೆಂದೊರ್ಮೆಯೆ ಪೊಱಗೆ ಪುಯ್ಯಲಾದತ್ತಾಗಳ್ || ೨೪೪

ವ|| ಅಂತ್ರವಳುವರ್ ಮೊಸಬುದಮಂ ಕೇಳ್ದು—ಇವು ಕಾವನ ಕುದುರೆಗಳಾಗದೆ ಮಾಣವೆಂದು ಬಗೆಯೊಳಟ್ಟಣಿಸಿ ಕಡುಮುಳಿದು || ೨೪೫

ಪೊಸತಪ್ಪ ಕಡಲಿದೆಂಬಂ |
ತೆಸೆದೊಪ್ಪಿರೆ ತಿಸುಳ ಬೇಗದಿಂ ಪುಟ್ಟಸಿದಂ ||
ಪುಸಿವಡೆಯಂ ಕಡುಮೆಱಿದಿರೆ |
ಪೆಸರಂ ಬಡೆದಾನೆಕುದುರೆತೇರಾಳ್ಗಳುಮಂ || ೨೪೬

ವ|| ಅಂತು ಪುಟ್ಟಸೆ ಮೊದಲಿಗನಪ್ಪ ಬಿಸುಗಣ್ಣೊಳೊಗೆದ ಬೀರಂ ತನ್ನೊಡನಾಡಿಗಳಪ್ಪಗ್ಗದ ಬೀರರ್ಬೆರಸು ಆಪಡೆಯಂ ಕೂಡಿಕೊಂಡು ಸೂಱೈಸುವ ನಿಸ್ಸಾಳದ ತಾಟಿಸುವ ತಂಬಟದ ಬಾರಿಸುವ ಬೀರವಱಿಯ ಪೊಡೆವ ಡಕ್ಕೆಯ ಪಿಡಿದ ಬಿರುದಿನ ಕಾಳೆಯ ಬಲ್ಲುಲಿಯ ಸಡಗರಮೆಲ್ಲಾದೆಸೆಗಳಂ ಕಿವುಂಡುವಡಿಸೆ, ಮುಂಜುವೆಟ್ಟದಿಂ ಪೊಱಮಡಲೊಡನೆ || ೨೪೭

ಮಿಾನಗೆಯೊಂತ ನೀಳ್ದ ಪೊಸಟಕ್ಕೆಯವೊಪ್ಪಿರೆ ಬರ್ಪಗಾಲಿಯಿಂ |

೧. ಪಾದಪಾಳಾರಪಂ. ಖ||    ೨ ಯಂತೆ. ಕ||

ತಾನೊಳಗಾದ ಬೆಟ್ಟು ಪುಡಿಯಾಗಿರೆ ಪೆರ್ಚಿದ ಕಾಲ ದೂಳಿಯಿಂ||
ಬಾನೆಡೆ ನಾಡೆಯುಂ ಪೊಡವಿಯಂತಿರೆ ಕೈದುಗಳಿಂದೆ ಬಂದವಂ|
ದಾನೆಗಳೊಡ್ಡು ತೇರ್ಗಳಣಿ ತೇಜಿಯ ಘಟ್ಟಿವಾಳ ವೊಗ್ಗರಂ||

ತರದಿಂ ಮೇಲೊಗೆದಿರ್ಪ ಪೀಲಿದಱಿಗಳ್ ತಳ್ತಾಗಸಂ ರೂಪುಗೆ|
ಟ್ಟಿರೆ ಕೂರ್ವಾಳ ತೊಳಪ್ಪ ನುಣ್ಬೊಗರದೆತ್ತಂ ಪರ್ವೆ ಕಾರ್ಮಿಂಚಿನಂ||
ತಿರೆ ಬಿಲ್ಲಾಳ್ಗಳ ಬಲ್ಸರಂ ದೆಸೆಗಳಂ ತಳ್ಪೊಯ್ಯೆ ಮಾಱಾಂತ ಬೀ|
ರರ ಸೊ[3]ಕ್ಕೇರ್ವೊರ್ದಲೋಡ ಬಂದು[4]ದಳವಿಂ ಪಾಡಿಂತು ಮುಕ್ಕಣ್ಣನಾ||

ಕೆಲಬರ್ ಬಟ್ಟೆಯ ಬೆಟ್ಟನಾದೊರ್ಡೆದು ಸೆಂಡಾಡುತ್ತುಮೆಕ್ಕಕ್ಕೆ
ಯಿಂ| ಕೆಲಬರ್ ಸಿಂಗಮನೊತ್ತಿ ಪಲ್ಲಣಿಸಿ ಬಲ್ಪಿಂದೇಱುತುಂ ಬೇಗದಿಂ||
ಕೆಲಬರ್ ಪೆರ್ಚಿದ ನೇಸಱಿಂ ನೊಣೆಯುತುಂ ಕೈನೀಡಿ ಮುನ್ನೀರ್ಗಳಂ|
ಕೆಲಬರ್ ಪೀರ್ದರೆಮಾಡುತುಂ ನಡೆದರೆತ್ತಂ ಬೀರರಾಪಾಡಿಯೊಳ್ ||

ಪೊಡವಿ ನಿಲಲಾಱದೊಲೆದೋ|
ಗುರ್ಡಿಸುಗುಮೆಂದಲ್ಲಿ ಬೆಟ್ಟನಿಟ್ಟಾರ್ಪಿಂದಂ||
ಪಿಡಿದೆಣ್ದೆಸೆಯಾನೆಗಳಂ|
ಕಡುನಲವಿಂದೇಱಿ ಬರುತುಮಿರ್ದರ್ ಕೆಲಬರ್||

ಬಿಸುಪವು*ರ್ದ ನೊಸಲ ಕಣ್ಣುಂ|
ತಿಸುಳಂಗಳನಾಂತ ಕೈಗಳುಂ ನೋೞ್ಪರನಂ||
ಜಿಸೆ ನಡೆತಂದರ್ ಕೆಲಬರ್|
ಪೆಸರಾಳ್ಗಳ್ ಬೆಟ್ಟನಣ್ಣೆಕಲ್ಲಾಡುತ್ತುಂ||

ತಕ್ಕಿನೊಳಾಂತಾಜವನೊಳ|

---

೧. ವೇಗೊ. ಖ|| ೨. ಚನೆ| ಯ್ತರೆ. ಕ || ಖ ||
೩. ಸೋಂಕು. ಕ|| ಖ|| ೪. ದೊಲವಿಂ. ಗ||

ಪೊಕ್ಕೆಮ್ಕೊಳ್ ಪೊಣರ್ದನಾದೊಡಂ ಮಿಗೆ ಸುಗಿವಂ ||
ತಿಕ್ಕುವೆವೆನುತ್ತೆ ಸಾಸಿಗ |
ರೆಕ್ಕೆಕ್ಕೆಯಿನಿರದೆ ಕೆಲಬರಿದಿರೇಱಿಂದರ್ || ೨೫೪

ವ|| ಅಂತಾಗಸಮಿಾಂದಂತೆಯುಮೊಳೆ ಬೆಸಲಾದಂತೆಯುಂ ಮುನ್ನೀರ್ ಮೇರೆವರಿದಂತೆಯುಂ ನಡೆದು ಭಂಡಣದೆಡೆಯೊಳ್ ತಂಡತಂಡದಿಂದೆ ಡ್ಡಮಪ್ಪಂತೊಡ್ಡಿ ನಿಲಲೊಡನೆ || ೨೫೫

ಕಾಲಾಳ್ಗಳ ತೇಗೊಡೆಯರ |
ಮೇಲಾಳ್ಗಳ ಜೋದರುಲಿಗಳೆಣ್ಬಂ ದೆಸೆಯೊಳ್ ||
ಕಾಲೂಱ ತಕ್ಕು ನಿಂದುದು |
ಮೇಲೊಡ್ಡಿ ದುದ್ವೈದೆ ಬಂದ ಮಾರ್ಪಡೆಯನಿತುಂ || ೨೫೬

ಕುಱುಪಿನ ಮಾಣಿಕಮರಿಗೆಯ |
ತೆಱಪುಗಳೊಳ್ ಪೊಳೆವ ಬಾಳ ಬೆಳ್ವೆಳಗಂದೇಂ ||
ಮೆಱೆದುದೊ ಕೆಮ್ಮುಗಿಲೆಡೆಯೊಳ್ |
ಮಿಱುಗುವ ಮಿಂಚೆಂಬ ತೆಱದಿನೆರಡುಂ ಪಡೆಯೊಳ್ || ೨೫೭

ಪಡೆಯಿಂದಮೊಗೆದು ಪರ್ವಿದ |
ಪುಡಿ ಮೆಯ್ಯಂ ಪತ್ತೆ ಪೋಗಿ ಬಾಂದೊಱೆಯುಂ ಪೊ ||
ಕ್ಕಡಿಗಡಿಗೋಲಾಡುವವೊಲ್ |
ಕಡುನೆಗೆದೊಪ್ಪಿದುವು ಮಿಳಿರ್ವ ಕೆಂಬಱವಿಗೆಗಳ್ || ೨೫೮

ಪೊಸಪೆಸಗೆಯ ಮಂಜಿಟಿಗೆಯ |
ಮಿಸುಗುವ ದೋರಿಯದ ಪಱಿಯ ಪುಲ್ಲಿಯ ಸೊಂಪಂ ||
ಪಸರಿಸಿದ ಪಕ್ಕರಕ್ಕೆಗ |

೧. ಪಕ್ಷ್ಯ. ಕ|| ಖ|| ೨. ಮಂಜಿಟಿಕೆ. ಖ|| ೩. ಪೊರಿಯ. ಕ||
೪. ಪೊಲಿಯ. ಕ|| ೫. ಸೊಂಪಿಂ. ಖ||

ಳೆಸೆದಿರ್ದುವು ತರದಿನೊಡ್ಡಿದೆರಡುಂ ಪಡೆಯೊಳ್ ||೨೬೨

ಬೆಚ್ಚಂತಾನೆಯ ಥಟ್ಟನೊ|
ಳಚ್ಚರಿಯಂ ತಳೆದ ಱಂಚ್ಚೆಯಂಗಳ್ ನಡೆನೋ||
ಟ್ಟಚ್ಚಿಗೆ ಚೆಲ್ವಂ ಬೀಱಿದು|
ವಚ್ಚರಸಿಯರೇಱಿ ಬಂದ ಪಾಱಿನ ತೆಱದಿಂ||೨೬೩||

ಪಱಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ ಬೆಚ್ಚಣೆವೆತ್ತ ಬಿಲ್ಗಳ|
ಚ್ಚರಿಗೆಡೆಯಾದ ಕನ್ನಡಿಯ ಕೂರ್ಪಿನ ಡೊಂಕಣಿಯಲ್ಲಿ ಜುಂಜಿನಂ||
ತಿರೆ ಮಿಳಿರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಳ್ಕೆ ಮಿಂಚುಬಿ|
ತ್ತರಿಸುವ ತೋಳ ಬಾಳ ಪರಿ ನಾಡೆಯುಮೊಪ್ಪಿದುದಿರ್ವಲಂಗಳೊಳ್||೨೬೪

ವ|| ಆಗಳೆರಡುಂ ಪಡೆಯೊಡೆಯರ್ ಕಾದುವ ಪೊೞ್ತುಱಿದು ಕಡು ಮುಳಿದು ಕೈಯ ಕುಂಚಮಂ ಬೇಗ ಬೇಗಂ ಬೀಸಲೊಡನೆ ||೨೬೫

ತಡಿವಿಱಿ ಬಂದು ತೆಂಕಣ|
ಬಡಗಣ ಕಡಲೊಂದನೊಂದು ತಾಗುವ ತೆಱದಿಂ||
ಬಿಡೆ ಗಜಱಿ ಮಿಕ್ಕು ತಕ್ಕಿಂ|
ಪಡೆಯೆರಡುಂ ದೆಸೆಗೆ ಮುಸಗಿ ತಾಗಿದುದೆತ್ತಂ||೨೬೬

ವ|| ಆಗಳಾಗಸಕ್ಕೆ ನೆಗೆದು ಪರ್ವಿದ ದೂಳಿಗೞ್ತಲೆಯೊಳ್ ತಂತಮ್ಮ ಪಿಡಿದ ಬಾಳ್ವೆಳಗಿಂ ಮಾಱೊಡ್ಡಂ ಕಂಡು ಕಾಲಾಳ್ ಕಾಲಾಳ್ಗಳೊಳ್ ಕುದುರೆಗಳ್ ಕುದುರೆಗಳೊಳ್ ತೇರ್ಗಳ್ ತೇರ್ಗಳೊಳ್ ಆನೆಗಳಾನೆಗಳೊಳೋವದೆ ಕಾದಿ ಮೆಯ್ಗಳಿಂ ಜುಮ್ಮನೆಚ್ಚು ಪಾಯ್ವ ಪೊಸನೆತ್ತರಿಂ ನೆಗೆದ ದೂಳಿಯುಂ ನಂದಿಸಿ ಪೆಱದೆಗೆಯಲೊಡನೆ||೨೬೭

ಕಡುನೆಗೆದಬ್ಬರಂ ಮೊಱಗಿನಂತಿರೆ ಬಿಲ್ಲೊಳಮರ್ಕೆವೆತ್ತ ಕ|

---

೧. ದೆಸೆಯೊಳ್. ಖ|| ೨. ಬಚ್ಚಣಿ. ಖ|| ೩. ಗಜಱು. ಖ||

ನ್ನಡಿಗಳ ಬಳ್ಳಿವೆಳ್ಪು ಕುಡುಮಿಂಚಿನವ್ರೋಲಿರೆ ಗಾಳಿವಟ್ಟೆಯೊಳ್ ||
ನಡೆವನ ಕಾಯ್ಪು ತಣ್ಣಗಿರೆ ಕಾರ್ಮುಗಿಲೊಡ್ಡುಗಳಂತಿವೆಂಬಿನಂ |
ಗಡಣಿಸಿ ಬಂದು ಕೋಲ ಮೞೆಯಂ ಕಱೆದರ್ ಮಿಗೆ ಬಿಲ್ಲ ಬಲ್ಲಹರ್ ||

ಮುಸಗಿ ಕವಿದಾರ್ಪಿನಿಂ ಬ |
ಗ್ಗಿಸಿ ನಾಲ್ಕುಂ ದೆಸೆಗೆ ಸರಲ ಸರಿಯಂ ಸುರಿವಂ ||
ತಿಸುವವರ್ಗಳ ಕೈಯೊಳ್ ನಿ |
ಟ್ಟಿಸಬಾರದು ತುಡುವ ಬಿಡುವ ಪವಣಂತಾರ್ಗಂ || ೨೬೮

ತಪ್ಪದೆ ನಟ್ಟಲಗಿಂದಂ |
ತೊಪ್ಪನೆ ಕರುಳೊಕ್ಕು ಬೇಗದಿಂದಂ ನೆಲದೊಳ್ ||
ಕುಪ್ಪಳಿಸಿದೊಡಂ ಬೀೞದೆ |
ಚಪ್ಪರಿಸುತ್ತೆೞ್ಚರಿಕ್ಕೆಯಿಂ ಬಿಲ್ಲಾಳ್ಗಳ್ || ೨೬೯

ಕಣೆ ತೀರೆ ಕಟ್ಟಿದಲಗಿಂ |
ಮಣಿಯದೆ ಕೀೞ್ಕೃದುಗೊಂಡು ಕಡುಮುಳಿಸಿಂ ಬಿ ||
ಲ್ಲಣಿ ತಳ್ತಿಱಿಯುತ್ತಿರ್ದುದು |
ಖಣಿಲೆನೆ ತಲೆ ಪಱಿದು ಪೊಡವಿಯೊಳ್ ಬೀೞ್ವನೆಗಂ || ೨೭೦

ಪೊಡೆದಾಡುತೊರ್ಮೆ ಬಿಲ್ವಡೆ |
ಪಡಲಿಡೆ ಕಂಡಾರ್ದು ಪರಿಗೆಕಾಱರ ತಂಡಂ ||
ನಡೆದು ಪಳಂಚಿದುದುರಿದಾ |
ಗಡೆ ಮುಗಿಲೊಂದೊಂದಱೊಳ್ ಪಳಂಚುವ ತೆಱದಿಂ || ೨೭೧

ತೊಲಗದ ಕಂಬದಾನೆಯು ಪಸುಂಬನೆ ಪಕ್ಕಿಯು ಸೂಲ ಸೂಲದಿಂ |

೧. ಬಲಂಬಿಲ್ಲ ಬಿತ್ತಗರ. ಖ|| ೨. ಗಿಂಬಂ. ಗ||ಖ||
೩. ನುಣಿಸದೆ ಕಿಳ್ಕೃದಿವಿಂದು. ಗ|| ಖ|| ೪. ಪೊಸೆಪ್ರೊಯ್ವುತೊ. ಖ|| ೫. ದ. ಖ||

ಗಿಲಿತದ ಗಂಡಗತ್ತರಿಯು [೧]ಗೊಳಿಯು ಪಂದಿಯು ಪೊನ್ನ ಬೀರಸಂ॥
ಕಲೆಯು ತೊಳಪ್ಪ ಕನ್ನಡಿಯು ಚೆನ್ನಡಿಯುಡ್ಡಣವೆಡ್ಡವಾಗೆ ಮೂ ।
ದಲಿಸಿ ಪೊಡಪುರ್ಗ ಪೆರ್ಚಿ ಕೆಲರುರ್ಕುಡಿಗಳ್ ತಱಿಸಂದು ಕಾದಿದರ್ ॥

ಕಡುಗದ ಪೊಯ್ಲಿಂದಂ ಕಾ ।
ಲಡಿಗಳ್ ಕಡಿಯಾಗೆ ನೀಡಿದುಪ್ಪರವೊಯ್ಲಿಂ ॥
ಪೊಣವಿಗೆ ಬೀೞ್ತರೆ ತಲೆ [೨]ಸೊ ।
ರ್ಕಡಗದೆ ಕೆಲರಿಱಿದು ಬೀರಸಿರಿಯೊಳ್ ನೆರೆದರ್ ॥ ೨೪

ವ॥ ಅಂತು ಪೊಣ್ದು ನುಡಿದು ಪೆಱದೆಗೆಯದೆ ಪೊಕ್ಕು ಬೆರಸಿ [೩]ಸಣ್ಣ ನಾದ ಪೇರಱಿಕೆಯ ಪರಿಗೆಕಾಱರಂ ಕಂಡು ॥ ೨೫

ಬಿಱುವರಿಯ ಬೇಗದಿಂದಂ ।
ಕುಱುಪಿನ ಪಟ್ಟಿಯಿಗೆಗಳೊಲೆಯೆ ಪೆರ್ಗಡಲೆಡೆಯೊಳ್ ॥
ನೆಱೆ ನಾವೆ ತಾಗುವಂದದೆ ।
ತೆಱಪಿಲ್ಲದೆ [೪]ತೇರ್ಗಳೊಡ್ಡು ತಾಗಿದುದಾಗಳ್ ॥ ೨೫

ತೇರೊಳಗಿರ್ದು ನಾಡೆಱಿಯುರೆಚ್ಚರಲಂಬಿನ ಸೋನೆ ಸುತ್ತಲುಂ ।
ಭೋರೆನು[೫]ತೊರ್ಮೆ ಸೈಗಱಿಯೆ ತೊಟ್ಟನೆ ಪರ್ವಿದ ಮರ್ವಿನಿಂದಮಾ॥
ತಾರಗೆವಟ್ಟೆಯುಂ ದೆಸೆಗಳಂ ನೆಲನಂ ಕಡಲಂ ಬನಂಗಳಂ ।
ಕಾರಿರುಳೈದೆ ನುಂಗಿದವೊಲಾದುದು ಕಾಳೆಗಮೇನಱುಂಬವೋ! ॥

[೬]ತೇರೊಳ್ ಪೂಡಿದ ತೇಜಿಗಳ್ ಸರಳ ಕೂರ್ಪಿಂಗಳ್ಕಿ ಪಿಮ್ಮೆಟ್ಟೆ ಕೆ ।
ನ್ನೀರೇಱಿಂದೊಗೆದೆಚ್ಚು ಪಾಯೆ ಪೊಡೆವಾತಂ ಜೋಲ್ದು ಕೈಗುಂದೆ ಕಂ॥
ಡಾರುತ್ತುಂ ಮುಳಿದೊತ್ತಿ ನೂಂಕಿ ಕಣೆಯುಂ ಬಿಲ್ಲುಂ ಬಿಸುಟ್ಟೆಕ್ಕೆಯಿಂ ।

---

೧. ಗೋಳಿಯ. ಖ॥ ೨ ಪೊ। ರ್ಕಡೆಗೆ. ಖ॥ ೩. ಸಣ್ಣ ಸುಣ್ಣವಾದ. ಖ॥
೪. ತೇರ್ಗಳಾಲಿದು ತಾಗಿದುವಾಗಳ್. ಖ॥ ೫. ತೊರ್ಮೆಯುಂ ತೊಟ್ಟನೆ. ಖ॥
೬. ತೇರಂ ಖ॥

ಕೂರಾಳ್ಗಳ್ ತಲೆಯೊತ್ತಿ ಕಟ್ಟಿದಲಗಿಂದಂ ಕುತ್ತಿಮೈಯಿಕ್ಕಿದರ್ ॥

ತೇರ್ಗಳಗೊಂದಣಂ ಮುಱಿದು ಮೆಟ್ಟಿದ ಕೊಂಬುಡಿದಂತೆ ಬೇಗದಿಂ।
ನೆರ್ಗನೆ ಬಿಟ್ಟು ನುಚ್ಚುನುಱಿಯಾಗೆ ಕಸಲ್ದಳವಿಂದೆ ಮಿಱು ಕೆ॥
ನ್ನೀರ್ಗಳ ಕಾಟ್ಪಸಲ್ ಮಸಗಿ ಕೂಡೆ ಪೆಣಂಗಳನೆತ್ತಿ ಗುಂಪಿನಿಂ।
ಭೋರ್ಗರೆದೆತ್ತಲುಂ ಪರಿಯೆ ಗೋಟಿಯುಲರ್ ಕಡುಕೆಯ್ದು ಕಾದಿದರ್॥

ಮುಳಿಸಿಂದಂ ಕಿಟ್ಟಿ ಬಾಳಂ ಜಡಿದಳವಿಯನಾರಯ್ದು ಝೂರೇ!
ಜಝೂರೇ!। ಹಳುರೇ! ಹೋಹೋ! ಮಝಾ! ಎಂಬುಲಿ ನೆಗೆವಿನೆಗಂ
ಬಿಟ್ಟು ವಾಜಿಾಂತ ಮೇಲಾ॥ ಳ್ಗಳನಾಗಳ್ ತಳ್ತು ಪೊಯ್ದಾರ್ದಿಱಿಪಿ
ಕುದುರೆಯಂ ಕೊಂಡು ತಮ್ಮೊಡ್ಡಿನೊಳ್ ಕ। ಣ್ಗೊಳಪನ್ನಂ ಪೊಕ್ಕು
ಗೆಲ್ಲಂಬಡೆದರದಟನಿಂ ರಾಯರಾವುತ್ತರಾಗಳ್ ॥ ೨೭

ಇಕ್ಕಿದ ಸೀಸಕಂ ಪಱಿದು ನೆತ್ತಿ ಸಿಡಿಲ್ದೊಡೆದೊಂದೆ ಗಾಯದಿಂ।
ಚಕ್ಕನೆ ಭೋಂಕನೆಟ್ಟು ಮಿಗೆ ಬೆನ್ನೊಳಮರ್ಚಿದ ಪೊನ್ನ ಪಲ್ಲಣಂ॥
ಪಕ್ಕರೆ ತೇಜಿವಾರು ಕಱಿದಿರ್ಕಡಿಯಾದುವು ಬಾಳ ಬಾಯೊಳಂ।
ತಕ್ಕುಮೆ ತೋರತಕ್ಕಿದೆನೆ ಗೋಟಿಯುಲರ್ ಕೆಲರಲ್ಲಿ ಕಾದಿದರ್ ॥ ೨೮

ತೊಟ್ಟನೆ ಪೊಂದಿದ ಕುದುರೆಯ।
ಥಟ್ಟಂ ಕಂಡಱಿದು ನೂಂಕಿ ಬಲ್ಕಾವಂತರ್॥
ಬಿಟ್ಟಕ್ಕಿದರಾನೆಗಳಂ।
ಬೆಟ್ಟುಗಳೊವರ್ದಲೆ ಮಸಗಿ ಕವಿದವೊಲೆತ್ತಂ॥ ೨೯

ಕೋಲ್ಗಾರರ್ ಸುರಿವಾಲಿವ।
ರಲ್ಗಳವೊಲ್ ನೆತ್ತಿಯೆಡೆಯ ಮುತ್ತುಗಳೆತ್ತಂ॥
ಗಲ್ಗಲನೆ ಸುರಿಯೆ ಜೋದರ್।

---

೧. ಪತ್ತಿ. ಖ॥

ಬಲ್ಗಣೆಯಿಂದೆೞ್ಚರದಟನಿಂದಾನೆಗಳಂ ॥ ೭೮

ಜಾಱದೆ ತನ್ನಾನೆಯಿನಾ ।
ಮಾಱಾನೆಯ ಕುಂಬತಳಕೆ ಪಾಯ್ದುಳವಿಂ ಕೈ ॥
ದೋಱಿ ಮಱುವಾನಿಸಂ ಮೆ ।
ಯ್ಯೇಱಿಂ ಕಂಡಗಿದು ಜೋಲೆ ಕೊಂದನದೊರ್ವಂ ॥ ೭೮

ಅಣೆದುದು ಕೊತ್ತಿನೊಂಕಿದುದು ಪೊಕ್ಕೊಡನಿಕ್ಕಿದುದೇಱ ಬಾಯ್ಗಳಿಂ । ನೆಣನುಗೆ ನೆತ್ತರುೞ್ಚಳಸೆ ಜಾದಿನ ಬೆಟ್ಟು ಮುಗುೞ್ವವಂತೆ ಘಂಡ॥ಣದೆಡೆಯೊಳ್ ಪೊಣರ್ವ ಪಲವಾನೆಗಳಂ ಕಡಪಿತ್ತದೊಂದು ಮ । ನ್ನಣೆವಡೆದಾನೆ ಬೊಬ್ಬಿಱಿಯೆ ತನ್ನಯ ಮೇಗಣ ಜೋದನಾರ್ಪಿನಿಂ ॥

ತಲೆಗಳ ಬಟ್ಟಲಿಂ ಮೊಗೆದು ನೆತ್ತರನಾಗಳೆ ಈಂಟಿಯೊಂಟ ಮೆ । ಯ್ಗಲಿಗಳ ಕಂಡದಿಂಡೆಗಳ ಬಕ್ಕಣಮಂ ತವೆ ಮೆಲ್ದು ಮೆಲ್ದು ಮೆ ॥ ಯ್ಯೊಲೆದುಡೆ ಜೋಲ್ದ ನಾಣುಱುದು ಕಣ್ ಸಸುಮುೞ್ಚಿರೆ ತೇಗಿ ತೇಗಿ ಮಾ । ರ್ಮಲೆದಿದಿರಾಗಿ ಕೈಸೞಿಯೊಳಾಡುವ ರಕ್ಕಸಿಯರ್ಕಳೊಪ್ಪಿದರ್ ।

ವ॥ ಅಂತು ನೋೞ್ಪರ ಕಣ್ಗೆ ಕೊಕ್ಕರಿಕೆಯಾದಾನೆಗಾಳೆಗದೊಳ್ ನಿಲ್ಲದೆ ತಲ್ಲಣದಿಂ ಪೆಱದೆಗೆವ ಬಿದಿವೆಡಂಗನೆಂಬ ಬಿಂಜಮಾಣಿಕನೆಂಬ, ಹರಿರಾಯನೆಂಬ, ತೋರಪತ್ರನೆಂಬ, ಚೌವಟಮಲ್ಲನೆಂಬ, ಮುಱುವ ರಕ್ಕಸನೆಂಬ, ರಾಯದಟಸೂಱೆಕಾಱನೆಂಬ, ತನ್ನೊಡ್ಡಿನ ಪೇರಾನೆಗಳಂ ಕಂಡು ಕಡುಮುಳಿದು ಬಿಸುಗಣ್ಣೊಳೊಗೆದ ಬೀರಂ ಕೂರಾಳ್ಗಳಂ ಕೂಡಿಕೊಂಡಲಗನುಗಿದು ಗಿಜ್ಜಿನೈತಂದಾನನೆವಿಲ್ಲ ಬಲ್ಲಹನ ಪಾಡಿಯುಂ ಕೂಡೆ ಪಾಡೞಿಯೆ ನೀಡುಂ ಮುಱಿವಾಗಳ್ ॥ ೭೮

ಕಟ್ಟಿದಿರೊಳಂತರಂ ನೆಱೆ ।
ನಿಟ್ಟಿಸಿ ನನೆವಿಲ್ಲ ಬಲ್ಲಹಂ ಮಾಱಣಿಯುಂ ॥
ನೆಟ್ಟನೆ ತೋಳ್ವಲದಿಂದೆ ।

ಬ್ಬಟ್ಟಿದನವನಿದಿರೊಳಾವನುಂ ನಿಂದಪನೇ ? ॥ ೨೯೬

ವ॥ ಅಂತು ಕೈಕೊಳ್ಳದೆ ಬೆಂಬತ್ತಿ ತೇನತೇನಂ ಮಸಗಿ ಸಂದಣಿಸಿ ಬಪರ್ ಸೊರ್ಕಾನೆಗಳ ಕಾಲ್ವೊಱಗೆ ನೆಲನೊಂದೆಸೆಗೊಲೆದು ಜಾಱುಂಗಲ್ಲಂತೆ ತೋಱುಯುಂ, ಮುಗಿಲಂ ಮುಂಡಾಡುವಂತಿರುದ್ದವಾದ ಪಲತೆಱದ ಕುಱಪಿನ ಮಿಳರ್ಪ ಪಟ್ಟಿಯಿಗೆಗಳ ಗಾಳಿ ಗಾಳಿವಟ್ಟೆಯೊಳ್ ನಡೆವ ಪಗಲೊಡೆಯನ ಕುದುರೆಯ ಸೇದೆಯಂ ಪಿಂಗಿಸೆಯುಂ, ಥಟ್ಟೊಡೆಯದೆ ತೆರಳ್ವ ತೇಜಿಗಳ ಕಾಲ ದೂಳಿ ನೆಗೆದು ಕೊಳುಗುಳದೊಳ್ ಪಸರಿಸಿ ಬೀರರನಳೆಸುವಚ್ಚರಸಿಯರಂ ಪೊಲಂಬುಗಿಡಿಸೆಯುಂ, ಕಾಲಾಳ್ಗಳಬ್ಬರಕ್ಕೆ ತಾಯ್ಮಟಲಿದ್ದೋಱು ಮೇರೆದಪ್ಪಿದ ಮುನ್ನೀರೊಳ್ ಕಡಲೊಡೆಯನೆಬ್ಬಿಡಂಗೆಯುಂ, ಜವನ ಮಂತಣಸೂಲದಂತೆ ನೆಗೆದ ಕೊಂತವ ಕೂರ್ನೆಯ ಕೋಲಾಟಕ್ಕೆ ತಾರಗೆವಟ್ಟೆಯೊಳ್ ನಡೆವ ಬಿಜ್ಜೋದರಿಯರ್ ಪುಗಲಱಯದೆ ಸಿಡಿಮಿಡಿಗೊಳುತ್ತಿರೆಯುಂ, ತೆಱಪುಗುಡದೆ ಸೂಱೈಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂ ಬಿರಿಯೆಯುಂ, ಬೇಗದಿಂ ನಡೆದೆತ್ತಿ ಬಂದು ಮಂಜುವೆಟ್ಟಮಂ ಮೂವಳಸಾಗಿ ಮುತ್ತಿದಾಗಳ್॥

ನನೆವಿಲ್ಲಾತನ ಮುಕ್ಕ।
ಣ್ಣನ ತಕ್ಕಂ ನೋಡವೇಱ್ಕುಮೆಂದೊಲವಿಂದಂ ॥
ತನತನಗೆ ಬಂದು ಮುಗಿಲೊ।
ಡ್ಡಿನ ಕೆಲದೊಳ್ ಸಗ್ಗದವರ್ಗಳೆಲ್ಲರ್ ನಿಂದರ್ ॥ ೨೯೭

ಕೋವಣಮುಂ ಗುಂಡಿಗೆಯುಂ।
ನೇವರಿಸಿದ ಬೂದಿಯುಂ ಜಲಕ್ಕನೆ ಚೆಲ್ವಿಂ॥
ತೀವಿರೆ ಬಿಸುಗಣ್ಗೊರವಂ।

೧. ತಿಸುರುಣಿಗೊರವಂ. ಕ॥

ಕಾವನ ತೋಳ್ವಲಮನಱವೆನೆಂದೇೞ್ತಂದಂ ||೨೯೦||
[೧]ಮಿಸಗುವ ನಾಲ್ಕುಂ ಕೋಡಿಂ |
ದೆಸೆವಾನೆಯನೇಱ ಪಿಡಿದ ಬೆಳ್ಗೊಡೆ ಸಸಿಯುಂ ||
ಮಸುಳಸೆ ಬಂದಿರ್ದಂ ಪಾ |
ಡಿಸುತುಂ ಪೆಸರ್*ವೆತ್ತ ಗಾಣರಿಂ ಪಲಗಣ್ಣಂ ||೨೯೧||
ತೊಳಗುವ [೨]ಸಂಕುಂ ಪಾಱುಂ |
ಬಳೆ ನೇರ್ಪಡೆ ಪರ್ದನೇಱ ಬಂದೊಲವಿಂ ಪ ||
ಜ್ಜಳಪ ಮುಗಿಲೆಡೆಯೊಳಿರ್ದಂ |
ತಳತಳಸುವ ತೊಡವನಾಂತು ಸಿರಿವೆಣ್ಣರಸಂ ||೨೯೨||
ಕರಮೊಪ್ಪುವೆಣ್ಟು ತೋಳುಂ |
ಬಿರಿವೂವಂ ನಗುವ ನಾಲ್ಕು ಮೊಗಮುಂ ಚೆಲ್ವಿಂ ||
ಪೊರೆಯೇಱರೆ ಬಂದಿರ್ದಂ |
ಸರಸತಿವರನಂಚೆಯೇಱ ನಲವಿಂ ಬೊಮ್ಮಂ ||೨೯೩||

ವ|| ಅನ್ನೆಗಮಿತ್ತಲ್ ||೨೯೪||
ಕೆಟ್ಟೋಡಿ ಪಾಡಿಯೆಲ್ಲಂ |
[೩]ಪಿಟ್ಟುಂ ಪಿಟ್ಟಾಗಿ ಪೋದೊಡಂ ಬಗೆಯದೆ ಕ ||
ಣ್ಗೆಟ್ಟಳವೆನಿಸಿದ ಬೆಳ್ಳಯ |
ಬೆಟ್ಟನೆ ಪೆಱದೆಗೆಯದೀಸನೊರ್ವನೆ ನಿಂದಂ ||೨೯೫||

ವ|| ಅದಂ ಕಂಡು ಕಂಗನೆ ಕನಲ್ದು ಮುಟ್ಟೆವಂದು ಮೂದಲಿಸಿ ನನೆ ವಿಲ್ಲಬಲ್ಲಹನಿಂತೆಂದಂ:— ||೨೯೬||
ಕಡುಪಿಂ ಪೂವಿನ ಕೋಲ್ಗಳ್ |

೧. ಎಸಗುವ, ಗ|| ೨. ಸಂಕಂ. ಗ|| ೩. ದಿಟ್ಟಂ. ಗ||

ಗಡಣಿಸಿ ಕವಿತಂದು ನಾಂಟುವಾಗಳ್ ನಿನ್ನೀ ||
ಜಡೆಯುಂ ತೊವಲುಂ ಪಾವಿನ |
ತೊಡವುಂ ಲಾಗುಳಮುಮಡ್ಡಮೇಂ ಬಂದಪುವೇ? || ೨೯೭

ನಿನ್ನಗ್ಗದ ಪಡೆಯುಲ್ಲಮು |
ದೆನ್ನಯು ಪೂಗಣೆಯು ಕೊಲೆಗೆ ಗುಱಿಯಾದುದು ಕೇಳ್ ||
ಇನ್ನಾದೊಡಮೆಳವೆಱಿಯಂ |
ಕೆನ್ನಂ ಪಿಡಿದಿರದೆ ಬಿಟ್ಟು ಬಾರ್ ಬಡಗೊರವಾ || ೨೯೮

ಎಡಗೈಯೊಳೊತ್ತಿ ಬಿಲ್ಲಂ |
ಪಿಡಿದೊಯ್ಯನೆ ತೀಡಿ ಗೊಣೆಯುಮಂ ಕಡುಪಿಂ ಜೇ ||
ವೊಡೆವಾಗಳ್ ನೆಲನನಿತುಂ |
ನಡುಗುವುದೆಲರ್ವೊಯ್ಲನಾಂತ ತಾವರೆಯೆಲೆವೋಲ್ || ೨೯೯

ಬಿರಯಿಗಳಂಜೆ ಕೂಡದರ ಕಲ್ಲೆದೆರ್ ಪವ್ವನೆ ಸೀೞ ಬಿರ್ಚಿದೋ |
ಪರ ಕಡುಸೊರ್ಕುಮೊಯ್ದುಗೆಯೆ ಪಿಂಗಿದ ನೀಱರ ಬಲ್ಪು ಪಾಱ ಪಾ ||
ದರಿಗರ ನಾಣ್ಗಳುರ್ಕುಗಿಡೆ ಬಲ್ಮೆಳಸಿಂದಮುಗಲ್ಕೆವೆತ್ತ ನ |
ಲ್ಲರ ಬಗೆ ಬಳ್ಕೆ ಜೇವೊಡೆಯ ಬಲ್ಲುಲಿ ನೀಳ್ದುದು ಕರ್ವುವಿಲ್ಲನಾ || ೩೦೦

ಬಿಸುಗದಿರನ ಕಡುಗಾಯ್ಪಂ |
ಮಸುಳಿಸಿದುವು ತುಱುಗಿ ನೆಗೆದು ನಾಲ್ಕುಂ ದೆಸೆಯಂ ||
ಮುಸುಕಿದುವು ಮುಳಿದರಂ ಜಂ |
ಕಿಸಿದುವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್ || ೩೦೧

ಚಲದಿಂ ಕಾವಂ ತೆಗೆದೆ |
ಚ್ಚಲರಂಬೆಡೆಗೊಂಡು ತೊಱಗಳುಂ ಬೆಟ್ಟುಗಳುಂ ||

೧ ಕೋಳ್ಗ. ಕ || ೨. ಗಿನ್ನಂದಿಡಧಿರದೆ. ಗ ||

ಪೊಲನುಂ ಬಾನುಂ ದೆಸೆಯುಂ।
ಜಲಕ್ಕನಲರಿಂದೆ ಸಮೆದವೊಲಾಯ್ತೆತ್ತಂ ॥೩೦೩

ಇವು ಮುನ್ನಾರಾರ ಬಲ್ಪಂ ನೆಲೆಗಿಡಿಸವಿವಾರಾರ ತಕ್ಕಂ ನೆಲಕ್ಕಿ।
ಕ್ಕವಿವಾರಾರುರ್ಕನೊತ್ತಂಬ[೧]ರಿದು ಕಿಡಿಸವಾರಾರ ಕಾಯ್ಪೆಲ್ಲಮಂ ನೂಂ।
ಕವಿವಾರಾರೇೞ್ಗೆಯುಂ ಕುಂದಿಸಿ ಕಳೆಯುವಿವಾರಾರ ಕೆ[೨]ಲ್ಮೆಯ್ಗಳೊಳ್
ನಾಂ। ಟವೆನುತ್ತಂತೆಲ್ಲರುಂ ಬಾಯ್ವಿಡೆ ಗಡಣದೆ ಪೂಗೋಲ್ಗಳೈತಂದು
ವಾಗಳ್ ॥೩೦೪

ಅದಟರ್ ಬಾಯ್ವಿಡೆ ಬಲ್ಲಿದರ್ ಪೆಳರೆ ಗಂಡರ್ ಜಾೞ್ ಕೈಕೊಳ್ಳದ।
ಗ್ಗದ ಬೀರರ್ ತೆಗೆದೋಡೆ ತೋರಣುಕೆಯಾಳ್ಗಳ್ ಬಳ್ಕಬೆಂಬೀೞೆ ಪೆ।
ರ್ಚಿದ ಕಂಪಿಂಗೆಳಸಿರ್ಪ ತುಂಬಿ [೩]ಕರಿಕಂತಾಗಿರ್ಪಿನಂ ಬಂದುವೊ।
ರ್ಮ್ಮೊದಲೊಳ್ ಮಾವಿನ ಬಳ್ಳಿಮಲ್ಲಿಗೆಯ ಕೋಲೆತ್ತೆತ್ತಲುಂ ಕಾವನಾ ॥೩೦೫

ಕಣೆಕಣೆಯನುಗುಳ್ವ* ತೆಱದಿಂ।
ಕಣೆಕಣೆಯುಂ ಕಱಿವ ತೆಱದಿನೆಂಟುಂ ದೆಸೆಯೊಳ್ ॥
ಕಣೆಕಣೆಯ [೪]ನೀಂಬ ತೆಱದಿಂ।
ಪಣಿದರನಗಿದಳರೆ ಕವಿದುವಾ[೫]ಗಳ್ ಕಣೆಗಳ್ ॥೩೦೬

ಮುಗಿಲೆಡೆಯಲ್ಲಿ ಬಂದು ಸುೞಿದಾಡುವ ಪೆಣ್ದಿರ ಕಣ್ಣ ಬೆಳ್ಪೊ ತಾ।
ರಗೆಗಳ ನೀಳ್ದ ನುಣ್ಬೆಳಗೊ ಮಿಂಚಿನ ಗೊಂಚಲೊ [೬]ಹಾದಿಗೆಟ್ಟುತೊ॥
ಟ್ಟಗೆ [೭]ನೆಗೆತರ್ಪ ಸುಣ್ಗದಿರೊ ಪೇೞೆನೆ ನೋೞ್ಪರ ಕಣ್ಗೆ ಸುತ್ತಲುಂ।
ಸೊಗಯಿಸಿ ಮೇಲೆಮೇಲೆ ಕವಿತಂದುವು ಭೋಂಕನೆ ಪೂವಿನಂಬುಗಳ್ ॥೩೦೭

ಗಡಣದೆ ಮಾದೇವಿಯ ಬಗೆ।

---

೧. ಬಡೆದು. ಕ ॥ ೨. ಕಾಲ್ಮೆಯ್ಗಳೊಳ್. ಗ ॥ ೩. ಕರಿ ತಾನಾ. ಕ ॥
೪. ನೀವ. ಗ ॥ ೫. ಪೆಳರೆಕವಿದುವು. ಕ ॥ ೬. ದಾರಿ. ಗ ॥ ೭. ನದೆತರ್ಪ. ಗ ॥

ಯೊಡೆಯನ ನೊಸಲೊಳ್ ಕದಂಪಿನೊಳ್ ಕೈ[1]ಮೊಗದೊಳ್ ॥
ತೊಡೆಯೆಡೆ[2]ಯೊಳ್ ತೋಳೆಡೆಯೊಳ್ ।
ಬಿಡೆ ನಟ್ಟುವು ಕಾವನಂಬುಗಳ್ ತಾವೈದುಂ ॥ ೩೦೮
ಕಟ್ಟಾಳ್ಗಳೆನಿಪ ರಕ್ಕಸ ।
ರೊಟ್ಟಜೆಗೆಟ್ಟಱಲೆ ಸಗ್ಗಿಗರ್ ನೆಲನನೊಡಂ ॥
ಬಟ್ಟರೆ ಕಾಳೆಗದೆಡೆಯೊಳ್ ।
ತೊಟ್ಟನೆ ಮಾದೇವಿಯುರಸನರೆವೆಣ್ಣಾದಂ ॥ ೩೦೯
ಮೊರೆದಾಡುವ ಮಱಿದುಂಬಿಯ ।
ನೆರವಿಗಳೈತಂದು ಮುಸುಱಿ ಪೊಸಗಂಪನುಣಲು ॥
ತ್ತಿರೆ ಕಾವನ ಮೇಲಂದ ।
ಚ್ಚರಸಿಯರಿಚ್ಚೆಯೊಳೆ ಮುಗುಳ ಮಱೆಯುಂ ಕಱಿದರ್ ॥ ೩೧೦

ವ॥ ಅದಂ ಕಂಡು ಕಡುಮುಳಸೆಂಬ ಕಿಚ್ಚಿನ ಕರ್ಬೊಗೆಯಂತಗುರ್ವಡೆದು ನೊಸಲೊಳ್ ಗಂಟಿಕ್ಕಿದ ಪುರ್ಬುಗಳುಂ, [3]ಆಕಿಚ್ಚಿನ ನಾಲಗೆಯಂತೆ ಕೆಂಪಡರ್ದ ಕಣ್ಗಳುಂ, ಪೊಱಮಡುವ ಸಾಪದಕ್ಕರದ ಪೊಯ್ಲಿಂಗೆ ನಡಗುವಂತೆ ಕತ್ತುವ ತುಟಿಯುಂ, ಪರ್ಬುವ ಕನಲ್ಕೆಯೆಂಬ ಬಳ್ಳಿ ಕೂರದಂಬಾದಂತೆ ಪಿಡಿದ ಲಾಗುಳಮುಂ ಅಂಜಿಕೆಯಂ ಪುಟ್ಟಿಸೆ॥

ಎಱಗುವ ತುಂಬಿವಿಂಡಗಿಯೆ ಬಗ್ಗಿಪ ಕೋಗಿಲೆ ಕೊಂಬುಗೊಂಡುಬ । ಳ್ಕುಱೆ ಮುಳಿದಡ್ಡವಾಯ್ದು ಗಿಳಿ ಮಲ್ಲಱಿಗೊಂಡೊಳಸಾರೆ ಮಾವುಕೈ ॥ ಮಱೆಯೆ ತೆರಳ್ದು [4]ರೂವುಗಿಡೆ ತೆಂಬೆಲರಂಚೆಗಳೊಡ್ಡು ಪಾಱೆಬ್ಬುಂ । ದೊಱೆದಳೆಯುಂ ಕನಲ್ದು ನಡೆತಂದು ಬಸಂತನ ಸೊರ್ಕು ಸೋ[5]ರ್ವಿನಂ ॥ ೩೧೧

೧. ಮುಂಮೊಗದೊಳ್ ಗ ॥ ೨. ತೋಳ್ತೊಡೆಯೊಳ್ತರದಿಂ ಬಿಡೆ ಗ ॥
೩. ಕಾಳ್ಕಿಚ್ಚಿನ. ಗ ॥ ೪. ಪೂಣ್ಕೆ. ಕ ॥ ೫. ಪೋಪಿನಂ. ಗ ॥

ವ|| ಮುಂದೆ ನಿಂದು—ಪಿರಿಯರೆಂಬುದಂ ಬಗೆಯದುರ್ಕಿಂದೆನ್ನೊಳ್ ಕಾದಿದೆ. ಅಂತದಱಂ ನಿನ್ನೋಪಳಂ ಕೂಡದೆ ಪೆಱರಱಿಯದಂತೆಲ್ಲಿಯಾದೊಡಂ ನಾಂ ಕಾವನೆಂಬುದಂ ಮಱೆದಿರ್, ಎಂದು ಬೇಗದೆ ಪೂಗಣೆಯಂಗೆ ಸಾಪಮನಿತ್ತುದಂ ಬಸಂತನಿಂ ನೆಲೆವೀಡಿನೊಳಿರ್ದಚ್ಚೆಗಾರ್ತಿ ಕೇಳ್ದು ಮುಚ್ಚೆವೋಗಿ ಒಱಯುಮೆಂತಾನುಮೆಚ್ಚತ್ತಿರಲೊಡನೆ ||೨೧೩

ಪರಿಗಿಡೆ ಕಣ್ಣನೀರಱುತುದೆಕ್ಕಸರಂಗಳ ತೋರಮುತ್ತುಗಳ್ ।
ಪುರಿದವೊಲಾದುವಿಟ್ಟ ಸಿರಿಕಂಡದ ಬೊಟ್ಟು ಕಱಂಗಿ ಕಸ್ತೆ ಕ ||
ತ್ತುರಿಯವೊಲೊಪ್ಪಿ ತೋಱದುದು ಸೂಡಿದ ಬಾಸಿಗವಾಗಳಂತೆ ದ ।
ಳ್ಪುರಿ ತಗುಳ್ದಂದದಿಂ ಕಱದುದಾಕೆಯ ಮೆಯ್ಬಿಸುಪೇನಳುಂಬವೋ || ೨೧೪

ನೋಡಿದ ಮಾಮರಂ ಕೊರಗಿ ಸೀಕರಿವೋದುದು ಪೊಕ್ಕ ಪೂಗೊಳಂ । ಪಾಡೞದೈದೆ ಕಾಯ್ದು ಕುದಿಗೊಂಡುದು ನೀಳ್ದೊಗೆತರ್ಪಸುಯ್ಯೆಲ || ಗೂಡಿದ ಗಾಳಿ ಸೋಂಕಿದವರಂ ಸುಡುತಿರ್ದುದು ಪೊತ್ತ ಪೂ ತಳರ್ । ಬಾಡಿ ಕಱಂಗಿ ಜುಯ್ಯೆನುತುಮಿರ್ದುವು ನೀಱೆಯ ಮೆಯ್ಯ ಬೆಂಕೆಯಿಂ ||೨೧೫

ವ|| ಮತ್ತಮೊರ್ವಳ್ ಮಿಸುಪೆಸಳ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯನೀಡಾಡಿ ಪೊಳೆಪುವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ದಳ್; ಬಡನಾಡಿಗಳಡಿಗಡಿಗೆ ತಳವ ಪನ್ನೀರ ತುಂತುರ್ವನಿಗಳಂ ಪೊಸತಪ್ಪ ಕಾರ ಸಿರಿಯ ಪರಿಯಂ ಪಡೆದಂತಿರ್ದಳ್; ಅಂದಂಬಡೆದ ಕೆಂದಳಿರ ಗೊಂದಣದೊಳೊಂದಿ ನಿಂದು ಸಂದಣಿಸಿ ನೆಗೆದ ಕೆಮ್ಮುಗಿಲ ನಡುವೆ ಪೊಳವೆಳವೆಱಯಂತಿರ್ದಳ್; ನಳನಳಸಿ ಬೆಳೆದ ಬೆಳ್ದಾವರೆಯ ತೊಳಗುವೆಳದಾವರೆಯ ಬಳಗಮಂ ತಳೆದು ಪಾವಿನ

೧. ಗಾವಿನ, ಗ ||

ಪಚ್ಚದಿನಚ್ಚರಿವಡೆದ ಜೋಗಿಣಿಯುಂತಿರ್ಪರ್ಳ್; ಮನ್ನಣೆವೆತ್ತ ಮೇಳದ [1]ಕೆಳದಿಯರ್ ಮಾಣದೆ ಮೇಲೆಮೇಲೆ ತಂದೊಟ್ಟಿದ ಸಿರಿಕಂಡದ ಕೋಟ್ಕಸೞಿಂ ಪುದಿದು ಜಂತದಿಂ ಕಡೆದು ಕಂಡರಿಸಿದ ಪುತ್ತೞಿಯುಂತಿರ್ಪರ್ಳ್; ತಡಿತಡಿಯ ತೆಂಗಿನೆಳನೀರ್ ಕೂಡೆ[2]ಕರೆಗಣ್ಮುವ ಕೊಳಂಗಳೊಳವೊಕ್ಕು ತಾವರೆಯ ಪಚ್ಚೆಲೆಯುಂ ಮೆಯ್ಯೊಳಾಂತು [3]ನುಣ್ಣಿತಪ್ಪೆಳವಿದಿರ ಬಣ್ಣಮಂ ತಳೆದ ನೀರ್ವಣ್ಣಂತಿರ್ಪರ್ಳ್; ಅಂತುಮಲ್ಲದೆಯುಂ ॥ ೩೧೫

*ಕುಳಿರ್ವ ಕೊಳಂಗಳೊಳ್ ಮಳಲ ದಿಂಟೆಗಳೊಳ್ ಸಮೆದಿರ್ಪ ಬೆಟ್ಟನೊಳ್ । ಬೆಳೆದೆಳಮಾವಿನೊಳ್ ತಳಿರ ಕಾವಣದೊಳ್ ಪರಿತರ್ಪ ಕಾಲ್ಗಳೊಳ್ ॥ ಬಳಸಿದ ಬಳ್ಳಿಮಲ್ಲಿಗೆಯ ಮಂಡವದೊಳ್ ಸುೞಿದಾಡಿ ಮತ್ತೆಯುಂ । ಕಳೆಯಲಿನಿತ್ತುಮಾೞಿಳವಳುರ್ಬಿದ ತನ್ನಯ ಮೆಯ್ಯ ಬೆಂಕೆಯುಂ ॥ ೩೧೬

ಕೆಂದಳಿರ ಪೞಿವ ಪಾಸಿನೊ ।
ಳಂದಂಬಡೆದಿಚ್ಚೆಗಾರ್ತಿ ನನೆವಿಲ್ಲಂ ತಾ ॥
ನೆಂದಿಂಗೆ ಬಂದು ಕೂಡುವ ।
ನೆಂದಂತಡಿಗಡಿಗೆ ಗಿಳಿಗಳಂ ಬೆಸಗೊಳ್ವಳ್ ॥ ೩೧೭

ತನಿವಣ್ಣಂ ಲಂಚಮಿಾವೆಂ ಪುರುಳೆ ನಿನಗೆ ಪೂಗೊಂಚಲಂ ಬೇಗದಿಂದಂ । ನಿನಗೀವೆಂ ತುಂಬಿ ಕೆಂದಾವರೆಯ [4]ಮಿಸುಪ ಮೆಲ್ಮೊಗ್ಗೆಯುಂ ಮಾಣದೆಂದುಂ । ನಿನಗೀ[5]ವೇನಂಚೆ ಕಂಪಂ ನಿನಗೆ ಸಲಿಸುವೆಂ ಕೂಡೆ ತಣ್ಗಾಳಿಯೆನ್ನೋ । ಪನನಿಂದಾರಯ್ದು ತಂದೆನ್ನೊಡನಿರಿಸಿದೊಡೆಂದಾಕೆ ಮಾತಾಡುತಿರ್ಪರ್ಳ್ ॥ ೩೧೮

---

೧. ಕನ್ನೆಯರ್. ಗ ॥ ೨. ಕಡೆ. ಕ ॥ ೩. ನುಣ್ಣನಪ್ಪೆ. ಕ ॥
೪. ಮಿಸುಗುವೊಳ್ಗಡ್ಡೆಯುಂ. ಗ ॥ ೫. ವೇಂ ಪಂಸೆ. ಗ ॥

ವ॥ ಅನ್ನೆಗಮಿತ್ತಲಾಬಾಂದೊಱೆದಲೆಯುನ ಸಾಪಂದಳೆದು ಬಂದು ನೀನೀಪ್ರೂವಿನ ಪೊಟ್ಟಲೊಳ್ ನನೆಯುಂಬನೆಂಬರಸಾದೆ. ನಿನ್ನ ಸಾಪಂ, ಎನ್ನ ಮಾತನೆಂದು ಕೇಳ್ದೈ, ಅಂದೇ ತೀರ್ದುದು. ಈಬಾಱೆವೊದಲಾದುದೆಲ್ಲಂ ನಿನ್ನ ಪಾಡಿ — ಎಂದಚ್ಚರಸಿ ಪೇೞ್ದು ತನ್ನ ನೆಲೆಗೆ ಪಾಱಿ ಪೋಗೆ ॥ ೩೦೮

ಗಿಳಿಯುಂದಾಮಾತಂ ಕೇ ।
ಳ್ದಿಳದಳಿರಂ ಗುಡಿಯನೆತ್ತಿ ಕೊಂಡೊಲವಿಂ ಕ ॥
ಣ್ಗೊಳೆ ಪೋಗಿ ಕಂಪುವೊಟ್ಟಲಂ ।
ಘಟ್ಟಿಲನೆ ಪೊಕ್ಕಱಿಪಿದುದು ಬಸಂತಂಗಾಗಳ್ ॥ ೩೦೯

ವ॥ ಅಂತಱಿಪಲೊಡನೆ ಕೋಗಿಲೆ ಕೈವಂದ ಮಾವಂ ಸಾರ್ದಂತೆಯುಂ, ಬಿಸಿಲೊಳ್ ಬೇಗುದಿಗೊಂಡವಂ ತಣ್ಗೊಳನಂ ಪೊಕ್ಕಂತೆಯುಂ, ಬಡವಂ ಕಸವರಮಂ ಕಂಡಂತೆಯುಂ, ನಲ್ಲಳ ನುಡಿಯಂ ಕಾದಲಂ ಕೇಳ್ಗಂತೆಯುಂ, ನೀಱಿಯ ಕಾಲ್ಪೊಯ್ಲಿನಸುಗೆ ತಳಿರ್ತಂತೆಯುಂ, ಪಿರಿದಪ್ಪ ಸಂತಸಮನೆಯ್ದಿ ಬಸಂತಂ, ತಳಿರ್ವನೆಯೊಳ್ ನಲ್ಲನಂ ನೆನೆದು ದೂಱುಸುತಿರ್ಪಚ್ಚೆಗಾತಿರ್ಗಾತೆಱನೆಲ್ಲಮಂ ಬಿನ್ನಪಂಗೆಯ್ದು ನಿಸ್ಸಾಳಮಂ ಸೋಱ್ಯಸವೇಟ್ಟಲೊಡನೆ ॥ ೩೧೦

ಪಡೆಯೆಲ್ಲಂ ನಡೆನೋಡಿ ಮೆಚ್ಚೆ ಬಿದಿಯುಂ ನಾಣ್ಗೊಡೆ ಬೆಂಕೊಂ
ಡವಂ। ಕಡಲೊಳ್ ಪಟ್ಟನನಿಕ್ಕಿ ಮೆಟ್ಟಿದದಟಂ ಮುಕ್ಕಣ್ಣನಂ ಗೆಲ್ದನೆ ॥
ನ್ಮೊಡೆಯಂ ಬಂದಪನೀಗಳಂತೆ ನಲವಿಂದಂ ಬಳ್ಳಿಮಾಡಂಗಳೊಳ್ ।
ಗುಡಿಯಂ ಬೇಗದೆ ಕಟ್ಟಮೆಂದು ಪಡೆವಳ್ಳರ್ ಸುತ್ತಲುಂ ಸಾಱಿದರ್ ॥ 31

ಕಳಸಂ ಕನ್ನಡಿ ಗುಡಿ ಪ ।
ಜ್ಜಳಿಸುವ ಮಾಂದಳಿರ ತೋರಣಂ ದೆಸೆದೆಸೆಯುಂ ॥

ಬಳಸಿರೆ ಬಾಜಿಪ ಪಱಕ |
ಗ್ಗೊಳಸಿರೆ ಪೊಱಮಟ್ಟರೊಸಗೆಯಿಂ ಪೊಸವೆಂಡಿರ್ ||

ವ|| ಅಂತು ಪೊಱಮಟ್ಟು ಸಿಂಗರಗಡಲ್ ಕರೆಗಣ್ಮಿದಂತೆ ಬರ್ಪ ಪೆಂಡಿರ ತಂಡಕ್ಕೆ ತಲೆದುಡುಗೆಯಾಗಿ ಬೆಳ್ಗೊಡೆಯು ಕುಂಚದ ಅಡಪದ ಡವಕೆಯ ಬಿಜ್ಜಣಿಗೆಯ ಕಜ್ಜಳದ ಕನ್ನಡಿಯ ಚೆನ್ನೆಯರ್ವೆರಸು ಇಚ್ಚೆಗಾರ್ತಿ ನಡೆವಾಗಳ್ || ೩೦೪

ಸುರಯಿಯ ಚೊಲ್ಲೆಯುಮಂ ಪೊಸ|
ಸುರಹೊನ್ನೆಯ ಮೊಗ್ಗೆಯೆಕ್ಕಸರಮುಂ ಪೊಂಬಾ ||
ದರಿಯ ಕೆಱುಮುಗುಳ ತೊಡರುಂ|
ಪರಿವಡೆದಿರೆ ಬಂದನಟ್ಟಿಯಿಂದೆ ಬಸಂತಂ || ೩೦೫

ನಡೆವರಸಂಚೆಯ ತಂಡ |
ಕ್ಕಡೆನೆಱಿಯದು ಪೊಡವಿ ಗಂಡುಗೋಗಿಲೆಯಣಿಗ ||
ಳ್ಗೆಡೆನೆಱಿಯದಿನಿತುಮಾಗಸ |
ಮೆಡೆನೆಱಿಯದು ಗಿಳಿಯ ದಟ್ಟಿಕೆ ದೆಸೆಯೆನಿತನಿತುಂ ||

ವ || ಅಂತು ಬಂದು ಪಿರಿದಪ್ಪೊಸಗೆಯಿಂದಿಚ್ಚೆಗಾರ್ತಿ ಕಾವನನಿದಿರ್ಗೊಳ್ವಲ್ಲಿ || ೩೦೬

ಅಡಿಯಂ ಬಲ್ಪಿಡಿದುವು ನು|
ಣ್ಗೊಡೆಯಂ ಪಿಡಿಕಿಸಿದುವಡರ್ದು* ಕಾವನ ತೋಳಂ ||
ಬಿಡದಪ್ಪಿದುವಂದಾಕೆಯ|
ಕೊಡಕೆವರಂ ನಿಮಿರ್ದು* ಪೊಳೆವ ತುಱುಗೆಮೊಗಣ್ಗಳ್|| ೩೦೭

ಬಿರಿದೊಳ್ದಾವರೆಗಂಪಂ|
ಕೊರಲುದ್ದಂ ಪೀರ್ವ ತುಂಬಿಯೆನೆ ನೀಱಿನ ಚೆ ||

ಲ್ದೊರೆದ ಸವಿದುಟಿಯನೊಲವಿಂ ।
ಬರೆ ಪೀರ್ದರ್ವು ನೋಡುವಿಚ್ಚೆಗಾತಿಯ ಕಣ್ಗಳ್ ॥೩೨೯ 330

ನಗೆಮೊಗದೊಳ್ ತೆಱಂಬೊಳೆದು ನುಣ್ದುಟಿಯೊಳ್ ಮೊಗಮಿಕ್ಕಿ ಗಲ್ಲದೊಳ್ । ಜಗುಟ್ದು* ಕೊಡಂಕೆಯೊಳ್ ನುಸುಳ್ದು* ಪೇರುರದೊಳ್ ಸುೞಿದಾಡಿ ತೋಳ್ಗಳೊಳ್ ॥ ಸೊಗಯಿಸಿ ಸೊರ್ಕಿ ಪೊರ್ಕುೞೊಳಡಂಗಿ ತೊಳಪ್ಪುಡೆಯೊಳ್ ಸಡಿಲ್ದು ಕಾ । ಲುಗುರ್ಗಳೊಳ್ಪೆದೆ ಮಾಪೊರ್ಳೆದುವಾಕೆಯ ಡಾಳಮನಾಂತ ದಿಟ್ಟಿಗಳ್ ॥೩೩೦

ನನೆಗಣೆಯನ ಮೆಯ್ವೊಳಗಂ ।
ಬಿನಿಗೊಳದೊಳ್ ಮೊದಲೆ ಮಿಳಿರ್ದ* ನೆಗೆದಾಡಿದುವಂ ॥
ದೆನಸುಂ ಕಡುನೀಱಿಯ ಚೆ ।
ಲ್ವಿನೆ ತೊಳಗುವ ಕಣ್ಗಳೆಂಬ ಪೊಸಮೀಂಬೊಣರ್ಗಳ್ ॥

ಸವನಿಸೆ ಹಮ್ಮುದಂ ನಡುಪ ಕಾಲ್ ಬೆಮರಂ ಪಿಡುತಿರ್ಪ ಗಲ್ಲಮು ।
ಣ್ಮವನ ಪಿರೆಚ್ಚು ಪಾಯ್ವ ಕಡೆಗಣ್ಣೊ ಸರಾಱುವ ಬಾಯ್ ಜಗುಟ್ದು ತೋ ॥
ಱುವ ಪೊಱಮಾಱೊಳುಚ್ಚಳಿಪ ತೆಳ್ಪುದಮಿರ್ವರೊಳೊಪ್ಪೆ ನೋಡಿದರ್ ।
ತವಕಿಪ ಕಣ್ಮಲರ್ ಸುಸಿಲನೊಪ್ಪಿಸೆ ಕಾವನುಮಿಚ್ಚೆಗಾತಿಯುಂ ॥

ವ॥ ಬೞಿಕ್ಕೆ ಬಸಂತಂ ಮುಂತಾಗಿ ಬಂದು ಕಾಣ್ಕೆಗೊಟ್ಟು ಕಂಡ ತನ್ನ ಪಡೆಯೆಲ್ಲಮನಳಪಱಿದು ಮನ್ನಿಸಿ ನನೆವಿಲ್ಲಬಲ್ಲಹಂ ಕೈವಂದ ಮಾವೆಂಬಾನೆಯನಿಚ್ಚೆಗಾತಿವೆರಸೇಱಿ ನಡೆತಂದು ಕಂಪಿನ ಪೊೞಲಂ ಪೊಕ್ಕು ಬೀದಿಗೊಂಡು ಬರ್ಪಾಗಳ್ ॥೩೩೧

ನೆಗೆದ ನೆಲೆಮಾಡದೊಳ್ ಪೊಸ ।
ದುಗುಲಮನೊಲವಿಂದೆ ಪೊದೆದು ನೋಡುವಳೊರ್ವಳ್ ॥
ಸೊಗಯಿಸಿದಳ್ ಮಿಱುಗುವ ಬೆ ।

ಳ್ಮುಗಿಲಂ ಮಱೆಗೊಂಡು ನಿಂದ ಬಿಜ್ಜೋದರಿವೋಲ್ ‖ ೩೩೪
ಮುಡಿ ಜಗುಱೆ ನೇವುರಂ ದನಿ ।
ಗುಡೆ ಬಡನಡು ಬಳ್ಕೆ ಮೇಲುದೋಸರಿಸೆ ತೊಳ ‖
ಪ್ಪುಡೆ ಸಡಿಲೆ ಬಂದಳೊರ್ವಳ್ ।
ನಡೆನೋಡಿದಳಾಗಳಂತೆ ನಾಣುವಿನೆಗಂ ‖ ೩೩೫

ಮುತ್ತಿನ ಪಚ್ಚವುಂ ತುಡುವುದಂ ಮಱೆದೊಪ್ಪಿರೆ ಮೇಳದಾಕೆಗಳ್ ।
ಕತ್ತುರಿಬೊಟ್ಟನೆಂತಿಡುವೊಡಂ ನಿಲಲೊಲ್ಲದೆ ಸಾರ್ದು ನಲ್ಮೆಯಿಂ ‖
ದೊತ್ತೆಯನಿತ್ತನಂ ಬಿಸುಟು ಚೌಕಿಗೆಯಂ ಪೊಱಮಟ್ಟು ಗಾಡಿ ಬೆಂ ।
ಬತ್ತಿರೆ ಬಂದಳೊರ್ವಳೆಮೆಯಿಕ್ಕದೆ ನೋಡಿದಳೊಲ್ದು ಕಾವನಂ ‖ ೩೩೬

ಸೋರ್ಮುಡಿ ಬೆನ್ನನಪ್ಪಳಿಸೆ ಬಿಂಕದಿನಿಕ್ಕಿದ ರನ್ನದೈಸರಂ ।
ಪೆರ್ಮೊಲೆಯಂ ಪಳಂಚೆ ನಗೆಗಣ್ ಮಱೆವುಲ್ಲೆಯ ಚೆಲ್ಲಗಣ್ಗಳಿಂ ‖
ನೂರ್ಮಡಿ ಚೆಲ್ವನಾನೆ ನೊಸಲೊಳ್ ಕುರುಳುಯ್ಯಲನಾಡೆ ಬೇಗದಿಂ ।
ಕೂರ್ಮೆಯನಾಂತು ನೀಱೆ ನಡೆತಂದಲರ್ವಿಲ್ಲನನೈದೆ ನೋಡಿದಳ್ ‖

ವ॥ ಮತ್ತಂ ‖ ೩೩೭

ಕುರುಳೋ ತುಂಬಿಯ ಬಂಬಲೋ ತೊಡೆಗಳೋ ಪೊಂಬಾಳೆಯೋ ಕಣ್ಗಳೋ । ದೊರೆವೆತ್ತೊಪ್ಪುವ ನೈದಿಲೋ ಬೆರಲೊ ಕೂರ್ಪಾಗಿರ್ದ ಪೂಗೊಲ್ಗಳೋ ‖ ಕೊರಲೋ ಸುಣ್ಣಾಳವಟ್ಟ ಕೌಂಗೊ ಪೊಸತಾಗಿರ್ದಪ್ಪುವೆಂದೈದೆ ಮಿಂ । ಡರ ತಂಡಂ ಬಱಿಸಲ್ವಿನಂ ನಡೆದು ಬಂದಾನೀಱನಂ ನೋಡಿದಳ್ ‖ ೩೩೮ ೧೩೪.

ಇಕ್ಕಿದ ರನ್ನದೋಲೆ ಪೊಸಮುತ್ತಿನ ಮೂಗುತಿ ತೋಳ ಬಂದಿ ನೀ ।
ಳ್ದೆಕ್ಕಸರಂ ತೊಳಪ್ಪ ಬೆರಲುಂಗುರಮಿಂಚರವಿಾವ ನೇವುರಂ ‖

---

೧. ಜಡಿಯೆ. ಗ॥ ೨. ಪೊರೆದಂತಿರೆ. ಖ॥ ೩. ನೆರೆದಂತೊ ಕ॥

ಚೊಕ್ಕಳವಪ್ಪ ಚೆಲ್ವನೊಳಕೊಂಡಿರೆ ಬೆಳ್ಳಿಯ ಬಳ್ಳಿವಾಡಮಂ ।
ತಕ್ಕಿನೊಳೇಱ ನೋಡಿದಳದೊರ್ವಳಗುರ್ವಿಪ ಕರ್ವುವಿಲ್ಲನಂ ॥ ೩೪೬

ವ॥ ಅಂತು ನಡೆನೋಡುವ ನಗೆಮೊಗದ ಮುದ್ದುಮೊಗದ ಸುಣ್ಮೊಗದ ತನ್ನೋಲಗದ ಪಲತೆಱದ ಪೆಂಡಿರ ಕಣ್ಗೆ ಗಾಡಿಯುಂ ಬೀಱುತುಂ ಬಂದರಮನೆಯುಂ ಪೊಕ್ಕು ಪರಿವಡದ ಪಿರಿಯ ಕರುವಾಡದ ಮುಂದಣ ಓಲಗಸಾಲೆಯೊಳ್ ಸಿಂಗರದ ಚೆನ್ನನಾಂತ ಪಟ್ಟವಣೆಯ ಮೇಲೆ ಇಚ್ಚೆಗಾರ್ತಿವೆರಸು ನನೆವಿಲ್ಲ ಬಲ್ಲಹಂ ಕುಳ್ಳಿರಲೊಡನೆ ॥ ೩೪೭

ನಿಗಳದ ನುಚ್ಚಿರಂ ನೆಗೆವಿನಂ ನುಡಿಗಳ್ ಕಿವಿಗಿಂಪನೀವಿನಂ ।
ಮುಗಮುಗಿಸುತ್ತುಮಿರ್ಪ ನಱುಸುಯ್ಗಳರ್ಕ್ಕಿಜೆನುಂಗುತಿರ್ಪಿನಂ ॥
ಬಗೆಗೊಳೆ ಬಂದು ನಿಂದು ನೆಱದಗ್ಗದ ನೀಱೆಯರೊಲ್ದು ಪರ್ವುವಾ ।
ಪೊಗಱಲಿ ಪೊಣ್ಮೆ ಬಿತ್ತರದೆ ಮುತ್ತಿನ ಸೇಸೆಯನಾಗಳಿಕ್ಕಿದರ್ ॥ ೩೪೮

ನೊಸಲೆಡೆಯಲ್ಲಿ ನೀಳ್ದ ಕುರುಳೋಳಿಗಳುಯ್ಯಲನಾಡೆ ಡಾಳಮಂ।
ಪಸರಿಪ ತೋರಮುತ್ತಿನ ಸರಂ ಮೊಲೆಯೊಳ್ ತಲೆಯೊತ್ತೆ ನಾಡೆಯುಂ॥
ಮಿಸುಗುವ ಕಣ್ಣ ನುಚ್ಚೆಳಗು ಜೊನ್ನದೊಳೋರಗೆಯಾಗೆ ಸೊಂಪು ಸಂ।
ದಿಸೆ ಪೊಸರನ್ನದಾರತಿಯ ನೆತ್ತಿದರಗ್ಗದ ಗಾಡಿಕಾರ್ತಿಯರ್ ॥ ೩೪೯

( ಉತ್ಸಾಹ ರಗಳೆ )

ಬಿಳಿಯ ನನೆಯ ಕಣೆಗೆ ನಾಡೆ ಪಗೆವರೊಡಲಸುಗಿಯೆ ಕೂಡೆ ।
ನೆಲನನೊಂದೆ ಕೊಡೆಯಿನಾಳ್ದು ಮಿಸುಪ ಜಸಮೆ ನಿಮಿರೆ ಕೇಳ್ದು॥
ಕುಳಿರ್ವ ಪೂಗೊಳಂಗಳಲ್ಲಿ ತಳಿರ ಕಾವಣಂಗಳಲ್ಲಿ ।
ಪಳುಕುವೆಸದ ಬೆಟ್ಟದಲ್ಲಿ ಪರಿವ ತೊಱೆಯ ತಡಿಗಳಲ್ಲಿ ॥

ತುಂಬಿವಿಂಡಿನಂತೆ ಪಾಡಿ ಜಕ್ಕವಕ್ಕಿಯಂತೆ ಕೂಡಿ ।
ದೆಸೆಯನಿಚ್ಛೆಯಿಂದೆ ನೋಡಿ ಸೊಗಯಿಪಂಚೆಯಂತಿರಾಡಿ ॥
ಪೊಳೆವ ತಳಿರ ನನೆಯ ವೊನೆಯ ತುಱುಗಿದಲರ ಬಳಸುವೆಲರ
ಮಿಳಿರ್ವ* ಮಿಡಿಯ ಗಿಳಿಯ ನುಡಿಯ ಪರಿವಕಾಲಕರ್ವುಗೋಲ॥
ಚೆಲ್ವನಾಂತು ತೋರ್ಪ ಬನದ ನಡುವೆ ತನ್ನದೊಂದು ಬಿನದ।
ಮಮರೆ ಮಿಱುಪ ಬಟ್ಟವೊಲೆಯ ಸೊಬಗು ರೂಡಿವಡೆದ ನೆಲೆಯ॥
ಚೆನ್ನೆಯರ್ಕಳೊಡನೆ ಕೂಡಿ ಮುಗುಳ ಸರಮನಡರೆ ಸೂಡಿ।
ನಲ್ಲರೊಡನೆ ಕೂರ್ಮೆಯಿಂದೆ ಕಾವನೊಡನೆ ಪೆರ್ಮೆಯಿಂದೆ ॥
ಮಾವಿನಡಿಯೊಳಾಡುತುಂ ಪಾಡನೆಯ್ದೆ ಕೇಳುತಂ।
ಪೊೞ್ತನಿಂತು ಕಳೆಯುತುಂ ತೊಲಗದಿರ್ದರೆಸೆಯುತುಂ ॥ ೩೪೪

ವ॥ ಇಂತು ಕಾವದೇವನುಂ ಬಸಂತನುಂ ರೂಡಿವೆತ್ತು ಗಾಡಿಯಿಂದೊಪ್ಪಿದರ್ ॥ ೩೪೫

ಪುರುಳುಂ ಲಕ್ಕಣಮುಂ ಮೆ ।
ಯ್ಸಿರಿಯುಂ ಮೆಯ್ವೆತ್ತು ಸೋಲಿಪುದಱಿಂದೊಲ್ದು ॥
ಕ್ಕರಿಗರಿದನೋದಿ ಪೊಸತಾ ।
ಗಿರೆ ಸೊಬಗಿನ ಸುಗ್ಗಿಯೆಂಬ ಪೆಸರಂ ಕೊಟ್ಟರ್ ॥ ೩೪೬

ಮತ್ತಂ ಸಕ್ಕದಮಱಿವರ್ ।
ಬಿತ್ತರದಿಂ ಮದನವಿಜಯಮೆಂದೊಲವೆರ್ದೆಯಂ* ॥
ಪತ್ತಿರೆ ಪೆಸರಿಟ್ಟರಿದ।
ಕ್ಕತ್ತಳವೆನಿಪುದೆನೆ ಮಿಸುಪ ಪೆಸರೆಸೆವಿನೆಗಂ ॥ ೩೪೭

೧. ನೊಡನೆ. ಗ॥ ೨. ಸ್ಮರನಗೆಲ್ಲವೆಂ. ಗ॥ ೩. ಮನಿಪ್ಪಾಕ. ಕ॥

ದೋಸದ ಮಾತು ಪೊರ್ದದೆನೆ ಬಲ್ಲವರಗ್ಗದ ಕನ್ನಡಂಗಳಿಂ।
ಬಾಸಣಮಾಗೆ ಪೇೞ್ದನೊಲವಿಂ ನೆಱೆ ಕಬ್ಬಿಗರೊಪ್ಪೆ ನಾಡೆಯುಂ॥
ಗೋಸಣೆ ಮಾೞ್ಪವನ್ನಮಿದು ರಾಯನ ನಾಟ್ಕಳೊಳರ್ಕೆ ನಿಚ್ಚಮುಂ।
ದೇಸೆಯ ಗೊತ್ತು ಜಾಣ್ಣುಡಿಯ ತಾಯ್ವನೆ ನುಣ್ಬುರುಳೇೞ್ಗೆಯೆಂಬಿನಂ॥

ಪದಪಿಂ ಪೊರ್ದದಿರಿಚ್ಚೆಯಿಾವ ಪದಿನೆಂಟುಂ ದೋಸಮುಂ ಪೊರ್ದದಾ । ಡಿದ ಮಾತೆಲ್ಲರ ಬಾಯ್ಕೆಯುಪ್ಪೞಿವಿನೊಳ್ ಮೂಲೋಕಮಂ ಕಾಣ್ಬಪು॥ ಟ್ಟಿದವೊಲ್ ಕಣ್ಗಮದೊರ್ಪ್ಪಿ* ತೋಱುವರುಹಂತಂ ನಲ್ಮೆಯಿಂ ಮಾೞ್ಕೆ ಬೇ । ಡಿದುದಂ ತನ್ನಱವಟ್ಟೆಗರ್ಗೆ ನೆಲನುಂ ಮುನ್ನೀರುಮಿರ್ಪನ್ನೆಗಂ॥ ಶ್ಲೋ ೧೫೦

ಇದು ಪಸುಳೆವಿಸಿಲ ಮಸಕದಿನೆಸಳ್ಕಿಸುವ ಪೊಸದಾವರೆಯು
ಪಸೆಯೊಳಸದಳಮೆಸೆವ ಸರಸತಿಯುಡಿದಳಿರ್ಗೆ ತಲೆದುಡುಗೆಯೆನೆ
ಪೆಸರ್ವಡೆವ ಬಿಜ್ಜೆವಳದಿಂ ಸಮೆದ

ಕಾವನ ಗೆಲ್ಲಂ

ಮುಗಿಯುತಿರ್ಪುದು.

೧. ದೂಸರ. ಗ॥ ೨. ಗೋಸದೆ. ಗ॥

# ಕಬ್ಬಿಗರ ಕಾವದ ಟಿಪ್ಪಣಿ.

## ಕಥಾಸಾರ.

:O:

ಕನ್ನಡ ನಾಡಿನಲ್ಲಿ (೧೯) ಪೂವಿನ ಪೊಳಲೆಂಬ(೨೭) ಒಂದು ಪಟ್ಟಣವಿತ್ತು. ಅದನ್ನು ನನೆಯಂಬನೆಂಬ ಅರಸು ಆಳುತ್ತಿದ್ದನು (೪೫). ಆತನು ವಸಂತಋತು ವಿನಲ್ಲಿ ಒಂದು ದಿವಸ ತನ್ನ ಸ್ನೇಹಿತನಾದ ನಗೆಗಾರನನ್ನು ಬರಿಸಿ (೬೩), ತಾನು ಆ ದಿನದ ಬೆಳಗಿನ ಜಾಮುಗಲ್ಲಿ ಒಬ್ಬ ಸುಂದರಿಯನ್ನು ಕನಸಿನಲ್ಲಿ ಕಂಡುದಾಗಿ ಹೇಳಿದನು (೬೯). ಅದಕ್ಕೆ ಆ ನಗೆಗಾರನು—"ಈ ಕನಸು ನಿಶ್ಚಯು. ಶೀಘ್ರದಲ್ಲಿಯೇ ನಿನಗೆ ಒಂದು ಸ್ತ್ರೀ ರತ್ನವು ದೊರಕುವದು." ಎಂದು ಹೇಳಿದನು(೮೧). ಆ ಮಾತಿಗೆ ಮೆಚ್ಚಿ ರಾಜನು ಅವನನ್ನು ಸನ್ಮಾನಿಸಿ, ಅವನೊಡನೆ ಉಪ್ಪರಿಗೆಗೆ ಹತ್ತಿ, ಅಲ್ಲಿ ಗೋಡೆಯಲ್ಲಿ ಚಿತ್ರಲಿಖಿತವಾದ ವನವನ್ನು ನೋಡುತ್ತಿದ್ದನು (೮೩). ಆ ನಗೆಗಾರನು—"ಈ ಬರೆದ ಬನವಿರಲಿ. ಈ ಪಕ್ಕದ ಹೂದೋಟವನ್ನು ನೋಡು," ಎಂದು ತೋರಿಸುತ್ತಿದ್ದನು (೮೪). ಅಷ್ಟರಲ್ಲಿಯೇ ಒಬ್ಬ ವನಪಾಲಕನು ಬಂದು, ಹಣ್ಣುಹಂಪಲುಗಳನ್ನು ಕಾಣಿಕೆಗೊಟ್ಟು(೮೮),—"ಮಹಾರಾಜನು ವನವನ್ನು ನೋಡಬೇಕು" ಎಂದು ಬಿನ್ನವಿಸಿದನು (೮೯). ಬಳಿಕ ರಾಜನು ಪರಿಜನದೊಡನೆ ಹೊರಟು, ವನಕ್ಕೆ ಬಂದು (೯೭), ಅದರ ಸೌಂದರ್ಯವನ್ನು ನೋಡುತ್ತಾ ಬರುವಲ್ಲಿ, ಒಂದುಮಾವಿನ ಮರದ ಕೆಳಗೆ ವನಲಕ್ಷ್ಮಿಯಂತೆ ನಿಂತಿದ್ದ ಒಬ್ಬ ಸ್ತ್ರೀಯನ್ನು ಕಂಡನು (೧೧೩). ಕಂಡು, ಅಲ್ಲಿಗೆ ಹೋಗಿ,—"ನೀವು ಯಾರು?" ಎಂದು ಕೇಳಿದನು. ಅದಕ್ಕೆ ಆ ಅಪ್ಸರಸ್ತ್ರೀಯು–ತಾನು ವನವಿಲೋಕನಾರ್ಥವಾಗಿ ಬಂದವಳೆಂದು ಹೇಳಿದಳು (೧೧೫). "ನೀವು ಇಂತಪ್ಪ ವನವನ್ನು ಎಲ್ಲಿಯಾದರೂ ಹಿಂದೆ ನೋಡಿದುದುಂಟೆ?" ಎಂದು ಕೇಳಿದನು. ಅದಕ್ಕೆ ಅವಳು ಇಂತೆಂದಳು:–(೧೧೬).

ಕಂಪಿನ ಪೊಳಲೆಂಬ ಪಟ್ಟಣದಲ್ಲಿ (೧೧೮)ಕರ್ಪೂರವಿಲ್ಲನೆಂಬ ದೊರೆಯಿದ್ದನು (೧೧೯). ಅವನಿಗೆ ಇಚ್ಚೆಗಾರ್ತಿಯೆಂಬ ಪತ್ನಿಯಿದ್ದಳು (೧೨೦). ಅವರಿಬ್ಬರೂ ಸುಖದಿಂದಿರುತ್ತಿದ್ದರು. ಹೀಗಿರುವಲ್ಲಿ, ಒಂದು ದಿನ ರಾಜನು ಒಡ್ಡೋಲಗದಲ್ಲಿ ಕುಳಿತಿರುವಾಗ (೧೨೯), ಒಬ್ಬ ಪಡಿಯರತಿಯು ಜೊನ್ನವಕ್ಕಿಯೆಂಬ ದೂತನನ್ನು ಕರೆದುಕೊಂಡು ಬಂದಳು. ಆ ದೂತನು ಪ್ರಭುವಿಗೆ ನಮಸ್ಕರಿಸಿ,

ಚಂದ್ರಕಿರಣಗಳನ್ನು ಕಾಣಿಕೆಗೊಟ್ಟು (೧೪೩),–"ಸ್ವಾಮಿ! ಹಿಮವತ್ಪರ್ವತದಲ್ಲಿರುವ ಶಿವನೆಂಬ ಒಬ್ಬ ಜೋಗಿಯು (೧೪೫), ನೆನ್ನೆಯ ರಾತ್ರಿ ಯುದ್ಧಮಾಡಿ, ನಮ್ಮ ಚಂದ್ರನನ್ನು ಕೈಸೆರೆಹಿಡಿದುಕೊಂಡಿರುವನು (೧೪೯). ಇದಕ್ಕೆ ತಕ್ಕ ಪ್ರತೀಕಾರವು ಮಹಾಸ್ವಾಮಿಯವರಿಗೆ ವೇದ್ಯವಾಗಿದೆ." (೧೫೦) ಎಂದು ವಿಜ್ಞಾಪಿಸಿದನು. ಕೂಡಲೇ ರಾಜನು ಕೋಪಗೊಂಡು ಶಿವನ ಮೇಲೆ ಯುದ್ಧಕ್ಕೆ ಪ್ರಯಾಣೋನ್ಮುಖನಾದನು. ಅದನ್ನು ನೋಡಿ, ಪಕ್ಕದಲ್ಲಿದ್ದ ಬಸಂತನು (೧೫೬)—ರಾಯಭಾರಿಯನ್ನು ಕಳುಹಿಸಿ, ಆತನು ತರುವ ಸಮಾಚಾರವನ್ನು ತಿಳಿದು ಆ ಬಳಿಕ ಯುದ್ಧಕ್ಕೆ ಹೋಗುವದು ಉಚಿತವೆಂದು ತಿಳಿಸಿದನು (೧೫೯).

ರಾಜನು ಅದಕ್ಕೆ ಒಪ್ಪಿ, ತೆಂಗಾಳಿಯನ್ನು ಕರೆದು.—"ನೀನು ಗೊರವನಲ್ಲಿಗೆ ಹೋಗಿ, ನಮ್ಮ ಚಂದ್ರನನ್ನು ಬಿಡಿಸಿಕೊಂಡು ಬಾ" ಎಂದು ಹೇಳಿದನು. ಕೂಡಲೆ ತೆಂಗಾಳಿಯು ಹೊರಟು ಹಿಮವತ್ಪರ್ವತವನ್ನು ಸೇರಿ, ಸಮಯವರಿತು ಈಶ್ವರನ ಸಭೆಯನ್ನು ಪ್ರವೇಶಿಸಿ (೧೬೦), ನಮಸ್ಕರಿಸಿ—"ನಮ್ಮ ಮಹಾರಾಜನು ತಮ್ಮ ಪ್ರಖ್ಯಾತಿಯನ್ನು ಕೇಳಿ, ತಮ್ಮಲ್ಲಿ ಸ್ನೇಹ ಬೆಳೆಯಿಸಬೇಕೆಂಬ ಇಚ್ಛೆಯಿಂದ ನನ್ನನ್ನು ಕಳುಹಿಸಿರುವನು(೧೬೯). ಪರಾಕ್ರಮಾದಿ ಗುಣಗಳಲ್ಲಿ ನೀವಿಬ್ಬರೂ ಸಮಾನರು. ತಾವು ನಮ್ಮ ಮಹಾರಾಜನ ಮೈತ್ರಿಯನ್ನು ಅಂಗೀಕರಿಸಿ ಚಂದ್ರನನ್ನು ಕಳುಹಿಸಿಕೊಡಿ." ಎಂದು ವಿಜ್ಞಾಪಿಸಿದನು (೧೬೨). ಅದಕ್ಕೆ ಕುಪಿತನಾದ ಈಶ್ವರನು ನಸುನಕ್ಕು (೧೬೭), ಕರ್ಪೂರವಿಲ್ಲನ ಪರಾಕ್ರಮವನ್ನು ಹಾಸ್ಯಮಾಡಿ, (೧೭೩– ೭೩)—"ಚಂದ್ರನನ್ನು ಬಿಡಿಸಿಕೊಳ್ಳುವ ಸಾಹಸವಿದ್ದರೆ ನಿಮ್ಮ ಮಹಾರಾಜನೇ ಬಿಡಿಸಿಕೊಳ್ಳಲಿ." (೧೭೪) ಎಂದು ಹೇಳಿದನು.

"ನಮ್ಮ ಮಹಾರಾಜನ ಪರಾಕ್ರಮವನ್ನು ನೀವಿನ್ನೂ ಕಂಡಿಲ್ಲ. ಸಹಸ್ರಾಕ್ಷ, ಬ್ರಹ್ಮ, ಇವರ ಪಾಡೇನಾಯಿತೋ ನೀವೇ ನೋಡಿಕೊಳ್ಳಿ (೧೭೬). ಬಿಟ್ಟುಕಳುಹದಿದ್ದರೆ ಪುಷ್ಪಬಾಣದ ಪೆಟ್ಟನ್ನು ಇನ್ನೆಂಟು ದಿವಸದಲ್ಲಿ ನೀವೇ ನೋಡುತ್ತೀರಿ." ಎಂದು ಹೇಳಿ, ಅಲ್ಲಿಂದ ಹೊರಟು, ಕರ್ಪೂರವಿಲ್ಲನಲ್ಲಿಗೆ ಬಂದು—"ಗೊರವನು ಚಂದ್ರನನ್ನು ಬಿಡನು; ಯುದ್ಧಕ್ಕೆ ನಿಂತಿರುವನು." ಎಂದು ತಿಳಿಸಿದನು (೧೭೭). ಕರ್ಪೂರವಿಲ್ಲನು ಕೋಪಾವಿಷ್ಟನಾಗಿ—"ಓಹೋ! ಆ ಬಡಗೊರವನು ನನ್ನ ಬಾಣಗಳನ್ನು ಉಟ್ಟುಕೊಳ್ಳುವ ಹುಲಿದೊಗಲೆಂದು ನೆನೆದನೋ; ಇಲ್ಲವೇ ಒಟ್ಟಿಕೊಳ್ಳುವ ಬೂ[illegible]ಡು ಬಗೆದನೋ! (೧೭೯). ಇದಕ್ಕೆ ತಕ್ಕುದನ್ನು ಈಗಲೇ ಮಾಡಿ, ಅವನನ್ನು ಅರೆವೆಣ್ಣಾಗಿ ಮಾಡಿ ಬಿಡುವೆನು (೧೯೫)."ಎಂದು ಉರಿದೆದ್ದು, ಸನ್ನಾಹಭೇರಿಯನ್ನು ಹೊಡಿಸಿ, ಬಸಂತನಿಗೂ ಮೆಲ್ಲೆಲರಿಗೂ ಸಮ

ಸ್ತ ಸೈನ್ಯವನ್ನು ಸಿದ್ಧಪಡಿಸುವಂತೆ ಆಜ್ಞಾಪಿಸಿದನು. ಕೂಡಲೇ ಸೈನ್ಯವು ಸಿದ್ಧವಾಯಿತು. ಆಗ ಕರ್ವೂರವಿಲ್ಲನು ತನ್ನ ವಿದ್ಯಾಬಲದಿಂದ ಮಾಯಾಸೈನ್ಯವನ್ನು ನಿರ್ಮಿಸಿ, ಅದನ್ನು ಮುಂದುಗಡೆಯಲ್ಲಿಯೂ, ತನ್ನ ನಿಜವಾದ ಸೈನ್ಯವನ್ನು ಅದರ ಹಿಂದೆಯೂ ಕಳುಹಿಸಿ, (೧೯೬) ಅವುಗಳ ಹಿಂದೆ ಶುಭಲಗ್ನದಲ್ಲಿ ಜೈತ್ರಯಾತ್ರೆ ಹೊರಟು, (೧೯೭) ಹೇರಡವಿಯನ್ನು ದಾಟಿ (೨೧೯), ಮುಂದೆ ಸಿಕ್ಕಿದ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದ ಸವಣನಿಗೆ ನಮಸ್ಕರಿಸಿ (೨೩೨), ಅಲ್ಲಿಂದ ಹೊರಟು ಮುಂದಿನ ವನವನ್ನು ದಾಟಿ (೨೩೪) ರನ್ನಗಲ್ಲೆಂಬ ಬೆಟ್ಟದ ತಪ್ಪಲಲ್ಲಿ ಬೀಡನ್ನು ಬಿಟ್ಟನು (೨೩೭).

ಈ ಸಮಾಚಾರವನ್ನು ಕೇಳಿ ಈಶ್ವರನು ವೀರಭದ್ರನನ್ನು ಕರೆಯಿಸಿ(೨೩೯) ಅವರ ಮೇಲೆ ಯುದ್ಧಕ್ಕೆ ಹೋಗುವಂತೆ ಆಜ್ಞಾಪಿಸುವಷ್ಟರಲ್ಲಿಯೆ; ಕಾವನ ಕುದುರೆಗಳು "ಹೊಲ" ದಲ್ಲಿದ್ದವರ ಮೇಲೆ ಬಿದ್ದುವೆಂದು ಒಂದು ಕೋಲಾಹಲ ಧ್ವನಿಯುಂಟಾಯಿತು (೨೪೭). ಆ ಗಲಭೆಯನ್ನು ಕೇಳಿ, ಈಶ್ವರನು ಒಂದು ಮಾಯಾಸೈನ್ಯವನ್ನು ನಿರ್ಮಿಸಿ (೨೪೯), ವೀರಭದ್ರಾದಿಗಳೊಡನೆ ಕಳುಹಿಸಿದನು (೨೫೦). ಈ ಸೈನ್ಯವು ಹಿಮವತ್ಪರ್ವತದಿಂದ ಹೊರಟು, ಯುದ್ಧರಂಗಕ್ಕೆ ಬಂದು ವ್ಯೂಹವನ್ನು ರಚಿಸಿ ನಿಂತುದು (೨೫೭). ಬಳಿಕ ಉಭಯಸೇನಾನಾಯಕರ ಅಪ್ಪಣೆಯು ಮೇರೆ (೨೬೪) ಎರಡು ಸೈನ್ಯಕ್ಕೂ ಘೋರವಾದ ಯುದ್ಧ ನಡೆದು (೨೬೫), ಈಶ್ವರಸೇನೆಯು ಪೆಟ್ಟುತಿಂದು ಹೋಯಿತು. ಅದನ್ನು ನೋಡಿ ತನ್ನ ಸೈನ್ಯದಮೇಲೆ ಕಾಣಿಸಿಕೊಂಡ ವೀರಭದ್ರಾದಿಗಳನ್ನು ಕಾವನು ಬಡಿದಟ್ಟಿ, ಓಡಿಸಿಕೊಂಡು ಹೋಗಿ, ಹಿಮವತ್ಪರ್ವತಕ್ಕೆ ಮುತ್ತಿಗೆ ಹಾಕಿದನು (೨೮೮). ತನ್ನ ಸೈನ್ಯವೆಲ್ಲಾ ನಷ್ಟವಾದರೂ ಲಕ್ಷ್ಯಮಾಡದೆ ಈಶ್ವರನು ಏಕಾಕಿಯಾಗಿ ಪ್ರತಿಭಟಿಸಿ ನಿಂತನು (೨೯೪). ಆಗ ಈಶ್ವರನನ್ನು ನೋಡಿ ಕಾವನು—"ಗೊರವ! ನಿನ್ನ ಸೈನ್ಯವೆಲ್ಲಾ ಹತವಾಯಿತು. ಇನ್ನಾದರೂ ಚಂದ್ರನನ್ನು ಬಿಟ್ಟು ಕಳುಹಿಸಿ ಬದುಕು." (೨೯೮) ಎಂದು ಮೂದಲಿಸಿ ಬಾಣಪ್ರಯೋಗಮಾಡಿದನು. ಆ ಪೆಟ್ಟಿಗೆ ಈಶ್ವರನು ಅರೆನಿಮೀಲಿತನಾದನು (೩೦೮). ಕೂಡಲೆ ಈಶ್ವರನು ರೋಷಾವಿಷ್ಟನಾಗಿ—"ಹಿರಿಯರೆಂಬುದನ್ನು ಬಗೆಯದೆ ಕೊಬ್ಬಿನಿಂದ ಎನ್ನೊಡನೆ ಕಾದಿದೆ. ಆದುದರಿಂದ ನೀನು ನಿನ್ನ ಪತ್ನಿಯಿಂದಗಲಿ ಇತರರಿಗೆ ತಿಳಿಯದ ಹಾಗೆ ನಿನ್ನನ್ನು ನೀನು ಮರೆತಿರು." ಎಂದು ಶಪಿಸಿದನು. (೩೧೨)

ಇದನ್ನು ವಸಂತನ ಮುಖದಿಂದ ಕೇಳಿದ ಇಚ್ಛೆಗಾರ್ತಿ ಇನ್ನೂ ಪ್ರಲಾಪಿಸುತ್ತಿರುವಳು (೩೧೩). ಶಾಪಗ್ರಸ್ತನಾದ ನೀನು ಪತ್ನಿಯಿಂದಗಲಿ ಇಲ್ಲಿ ನನೆಯಂ

ಬನೆಂಬರಸಾಗಿರುವೆ. ನನ್ನ ಈ ಮಾತನ್ನು ಕೇಳಿದಾಗಲೇ ನಿನಗೆ ಶಾಪವಿಮೋಚನೆಯಾಯಿತು. ಈ ಬಾಳೆ ಮುಂತಾದವು ನಿನ್ನ ಸೈನ್ಯವು. ಎಂದು ಹೇಳಿ, ಆ ಅಪ್ಸರಸ್ತ್ರೀಯು ಹಾರಿ ಹೋದಳು (೩೧೯).

ಇದನ್ನೆಲ್ಲಾ ಕೇಳುತ್ತಿದ್ದ ಒಂದು ಗಿಳಿಯು ಕಂಪುಪೊಳಲಿಗೆ ಹೋಗಿ, ಈ ಸಂಗತಿಯನ್ನು ತಿಳಿಸಿತು. (೩೧೨) ವಸಂತನು ಬಹಳ ಸಂತೋಷದಿಂದ ಪಟ್ಟಣವನ್ನು ಸಿಂಗರಿಸಿ, ಇಚ್ಚೆಗಾರ್ತಿ ವೊದಲಾದವರೊಡನೆ ಇದಿರು ಬಂದು, ಕಾವನನ್ನು ಕರೆದುಕೊಂಡು ಹೋಗಿ ವಿಜೃಂಭಣೆಯಿಂದ ಪಟ್ಟಾಭಿಷೇಕವಾಡಿದನು. (೩೪೧—೪೨) ಆ ಮೇಲೆ ಕಾವನೂ ರತಿಯೂ ಸುಖದಿಂದ ಇದ್ದರು.

———— o ————

## ಟಿಪ್ಪಣಿ.

೧. ಗಾಡಿ—"ಗಾಡಿಯೆನಲ್ಕೊಬಗು." ಚತುರಾಸ್ಯನಿಘಂಟು. ಸೋಲಿಸು—ಮೋಹಪಡಿಸು; ಪ್ರ. "ಕಣ್ಸೋಲಮುನೆಱೆಯುಂ ಪೆಱು | ವೆಣ್ಸುರವಧುಗೆಣಿಕೆಯೆನಿಪ್ಪೊಡಂ". ಉರ್ಕು—ಔದ್ಧತ್ಯ. ಅಂಬು—ಬಾಣ. ಅಧಟರ್—ಪರಾಕ್ರಮವುಳ್ಳವರು. ಏಳ್ಗೆ—ಅಭಿವೃದ್ಧಿ; ಹೊಸಗನ್ನಡದಲ್ಲಿ ಏಳಿಗೆ. ಪಜ್ಜಳಿಪ್ಪ—ಪ್ರಜ್ವಲಿಸುವ, ಪ್ರಕಾಶಿಸುವ; ಇಲ್ಲಿ ಅಂತ್ಯ ಪಕಾರಕ್ಕೆ "ಇತಃ ಪೋಬೆ" ಎಂಬ ಶ.ಶಾ.57ನೆಯ ಸೂತ್ರದಿಂದ ದ್ವಿತ್ವವಿಕಲ್ಪ. ಜಸ—ದ್ಭ. ಯಶಸ್. ಎಣ್ದೆಸೆ—ಎಣ್ಟು+ದೆಸೆ, "ಪರಮುಕ್ಕೆ ಲೋಪಮೆಣ್ಬರ್ಕಕ್ಕಂ" ಶ.ದ. 189. ಈಗಾವಗಂ—ಈಗೆ+ಆವಗಂ, 'ಈ' ಧಾತುವಿನ ಆಶೀರೂಪ, ಈಗೆ; ವಿಧ್ಯರ್ಥದಲ್ಲಿ ಪ್ರಥಮಪುರುಷದಲ್ಲ ಧಾತುವಿಗೆ 'ಗೆ' ಪ್ರತ್ಯಯ ಸೇರುತ್ತದೆ. ಜಾಣ್ನುಡಿ—ಜಾಣ+ನುಡಿ; ಇಲ್ಲಿ ನಕಾರ ಣಕಾರವಾಯಿತು, ಶ.ದ. 158. ಮೆಯ್ಸಿರಿ—ಶೋಭೆ, ಅವಯವಾರ್ಘ, ದೇಹಶ್ರೀ. ನನೆ—ಮೊಗ್ಗು. ಬಲ್ಲಹಂ—ದ್ಭ. ವಲ್ಲಭಂ.

ಕಂ || ಆಟಕವೀಶ್ವರವರವಚ|
ನೋದಿತಮೆನಿಸಿದ ಮಹಾಕೃತಿಗೆ ವದನಂ ತಾ ||
ನಾದುದು ಬಗೆವಂದಾಶೀ|
ರ್ವಾದಸಮಸ್ಕಾರವಸ್ತುನಿರ್ದೇಶಂಗಳ್ || ಎಂದು

ಉದಯಾದಿತ್ಯಾಲಂಕಾರದಲ್ಲಿ ಹೇಳಿರುವ ಮಂಗಳಗಳಲ್ಲಿ ಆಶೀರೂಪವಾದ ಮಂಗಳವು ಇಲ್ಲಿ ಮಾಡಲ್ಪಟ್ಟಿದೆ.

೨. ಸಿರಿ—ದ್ಭ. ಶ್ರೀ. ಮಾದೇವ—ದ್ಭ. ಮಹಾದೇವ; ಮಹಚ್ಛಬ್ದಸಹಶಬ್ದಗಳಿಗೆ ಸಮಾಸದಲ್ಲಿ ಮಾ, ಸಾ ಎಂಬಿವು ಆದೇಶವಾಗಿ ಬರುತ್ತವೆ; ಉ. ಮಹಾಜನಂ—ಮಾಜನಂ, ಸಹವಾಸಿ—ಸಾವಾಸಿ; ಶ.ದ 291 ಎಱೆಯ—ಸ್ವಾಮಿ. ಕೆಂದಾವರೆ—ಕೆಚ್ಚನೆ+ತಾವರೆ, ಕೆಂಪಾದ ಕಮಲ ಶ. ದ. 182. ಪೊರೆಗೆ—ಧಾ.ಪೊರೆ, ಪೋಷಣೇ. ಸಿರಿಗಂಪು—ಶ್ರೇಷ್ಠವಾದ ಪರಿಮಳ. ಪೞಮೆವಱೆ—ಪೞಮೆಯ ಮಱೆ, ತುಂಬಿಯ ಮರಿ; ಇಲ್ಲಿ "ಸ್ವರಾದ್ವಃ ಪವರ್ಗಸ್ಯ" ಎಂಬ ಶ.ಶಾ || ಸೂ 91 ರಿಂದ ಮಕಾರಕ್ಕೆ ವಕಾರ ಬಂದಿದೆ. ಎಂತು+ಅಂತು+ಒಲವಿಂದಂ. ಒಲವು—ಪ್ರೀತಿ. ಇಲ್ಲಿ ಸಿರಿಯರಸನ ಮಾದೇವನ ಸರಸತಿಯೆಱೆಯನ ಎಂಬುದಕ್ಕೆ ಬದಲಾಗಿ ವಿಭಕ್ತಿವಚನಪಲ್ಲಟದಿಂದ

"ಸಿರಿಯುರಸಂ ಮಹಾದೇವಂ ಸರಸತಿಯೆಲ್ಲರ್ಗೆಯುರ್ಕಗಳ್" ಎಂದು ಪ್ರಯೋಗಿಸಿದೆ; ಹೀಗೆ ಪ್ರಯೋಗಗಳುಂಟು. ಪ್ರ. "ಕಣಚರಣೋಕ್ತಿ ಜೈಮಿನಿಯ ವಾಣಿಗಳಿಂ ಮಿಗೆ ತಾಳ್ದಿ ಜಾಣ್ಮೆಯುಂ" ಮಿತ್ರವಿಂದಾಗೋವಿಂದಂ. ಅಂಕ. ೧.೧೧; "ಸಾಜದಕರ್ಪು, ನೇವುರದ ಪಚ್ಚೆ ವಣ್ಣಿಯ ಪಸುರ್ಪು, ಉಟ್ಟ ಪೀತಾಂಬರದ ಪೊಂಬೊಗರ್ಗಳಿಂ ಮೂವಣ್ಣಂ ಬಣ್ಣಿದು." ಚಿಕದೇವರಾಯವಂಶಾವಳಿ. ಪು ೩೯

೩. ಗರುವಿಕೆ—ಗರುವ+ಇಕೆ, ಗೌರವ; ಭಾವಾರ್ಥದಲ್ಲಿ "ಇಕೆ" ಶ ಶಾ || ೩೩೩. ಇಂಬು—ಸ್ಥಾನ; ಪ್ರ. "ಅಸ್ಯವಿಂಬಲ್ಲ ಭಾಸುರನೇತ್ರದ್ವಿತಯಪ್ರಚಾರತೆಗೆ." ಗಿರಿಜಾಕಲ್ಯಾಣ. ೬. ೪. ತವರ್ಮನೆ—ಹುಟ್ಟಿದ ಮನೆ, ಜನ್ಮ ಭೂಮಿ. ಮೈಮೆ—ದ್ಭ. ಮಹಿಮೆ. ಮೇರೆ—ಎಲ್ಲೆ, ಗಡಿ. ನನ್ನಿ ಸತ್ಯ, ಪ್ರ. "ತಂದೆಯ ನನ್ನಿಗಿತ್ತು ಧರೆಯುಂ" ಪಂಪರಾಮಾಯಣ.೬೬. ಆಗರಂ-ಗಣಿ, ತ್ಸ.ಆಕರ. ಅರಿತ ಜ್ಞಾನ, ಅರಿ, ಜ್ಞಾನ ಎಂಬುದರ ಭಾವರೂಪ. ಗೊತ್ತು—ಇರುವ ಸ್ಥಾನ. ಪೆಸರ್ವೆತ್ತ- ಪೆಸರ್ + ಪೆತ್ತ—ಹೆಸರನ್ನು ಹೊಂದಿದ, ಪ್ರಖ್ಯಾತವಾದ. ನೆಗಳ್ತೆಗೆ—ಯಶಸ್ಸಿಗೆ; ಧಾ.ನೆಗಳ್—ಉದ್ಯೋಗಖ್ಯಾತಯೋಃ. ತಾಣ ದ್ಭ. ಸ್ಥಾನ. ಬಗೆ—ಹೃದಯ; ಪ್ರ. "ಬಗೆಗೊಳ್, ಬಗೆವನೆ." ಪೊಗಳ್ತೆ—ಪ್ರಸಿದ್ಧಿ. ಆಂತಳ್- ಧರಿಸಿದಳು, ಧಾ. ಆನ್—ಧಾರಣೇ. ಕೂರ್ಮೆ—ಪ್ರೀತಿ; ಕೂರ್ ಸ್ನೇಹೇ ಎಂಬುದರ ಭಾವನಾಮ. ಒಸೆದು—ಪ್ರಸನ್ನಳಾಗಿ; ಧಾ. ಒಸೆ—ಪ್ರಸಾದೇ. ಕಬ್ಬ—ದ್ಭ. ಕಾವ್ಯ. ಬಲ್ರ್ಪು—"ಬಲ್ರ್ಪನೆ ಪ್ರೌಢಿಯೊಳಕ್ಕುಂ" ಕರ್ಣಾಟಕ ಶಬ್ದಾನುಶಾಸನ. ೧೭.

ಪೂಜ್ಯಳಾಗಿಯೂ, ಸುಂದರಳಾಗಿಯೂ, ಮಹಿಮೆಯುಳ್ಳವಳಾಗಿಯೂ, ಸತ್ಯಕ್ಕೆ ನೆಲೆಮನೆಯಾಗಿಯೂ, ಜ್ಞಾನಕ್ಕೆ ಆಶ್ರಯಳಾಗಿಯೂ, ಪ್ರಖ್ಯಾತಿಗೆ ಪಾತ್ರಳಾಗಿಯೂ ಕವಿಹೃದಯಸ್ಥಳಾಗಿಯೂ ಇರುವ ಸರಸ್ವತಿ ನಮಗೆ ಕವಿತಾಪ್ರೌಢಿಯನ್ನು ಕೊಡಲಿ! ಎಂದು ತಾತ್ಪರ್ಯ.

೪. ಸನ್ನಿದ—ದ್ಭ. ಸನ್ನಿಹಿತ, ಸಮೀಪ. ಕಣ್ಣಮಯ್ಯ—ಈತನಿಗೆ ಕರ್ಣಪಾರ್ಯನೆಂದು ಸಾಮಾನ್ಯವಾದ ಹೆಸರು, ನೇಮಿನಾಥಪುರಾಣವನ್ನು ರಚಿಸಿದವನು. ಕಡುಜಾಣ್- ಕಡಿದು | ಜಾಣ್ ಅಧಿಕವಾದ ಜಾಣ್ಮೆ; ರನ್ನ—ಕವಿರತ್ನ; ಪರಶುರಾಮಚರಿತ, ಚಕ್ರೇಶ್ವರಚರಿತ, ಅಜಿತನಾಥಪುರಾಣ, ಗದಾಯುದ್ಧ, ಇವುಗಳನ್ನು ರಚಿಸಿದವನು. ಗಜಗ—ಇವನ ವಿಷಯವಾಗಿ ಏನೂ ಗೊತ್ತಿಲ್ಲ. ಬಿನ್ನಣ—ದ್ಭ. ವಿಜ್ಞಾನ, ಕೌಶಲ. ಅಗ್ಗಳ—ಚಂದ್ರಪ್ರಭಪುರಾಣವನ್ನು

ರಚಿಸಿದವನು. ಕಾಣ್ಕೆ–ನೈಪುಣ್ಯ; ಧಾ. ಕಾಣ್, ದರ್ಶನೇ: ಮತ್ತೊಂದರ್ಥ ಉಪಾಯನ, (ನಜರು) ಈಯರ್ಥಕ್ಕೆ (೧೪೩) ನೋಡಿ. ಹೊಸಗನ್ನಡದ ರೂಪ, ಕಾಣಿಕೆ. ಜನ್ನಿಗ–ಕೇಶಿರಾಜನ ಸೋದರಮಾವ; ಯಶೋಧರ ಚರಿತೆ, ಅನಂತನಾಥ ಪುರಾಣ, ಇವುಗಳನ್ನು ರಚಿಸಿದವನು.

೫. ಒಪ್ಪಂಬೂಸಿದನ್ತೇಲ್–ಒಪ್ಪವಿಟ್ಟ ಹಾಗೆ. ಶ. ದ. 167 ರ ಪ್ರಕಾರ ಕ್ರಿಯಾಸಮಾಸದಲ್ಲಿ 'ಕನ್ನಡದದಂತಕ್ಕಮುಂದಂತಕ್ಕಂ ಬಿಂದು ವಿಕಲ್ಪಂ'. ಉ ಬೆಸಂಬಡೆದಂ, ಬೆಸವಡೆದಂ. ತೇಂಬೊಳೆವ ಚೆನ್ನಾಗಿ ಹೊಳೆಯುವ; "ತೇಂಬೊಳೆದುದೆಂದು ತೋರ್ಕೆವಡೆದ ಕಾಂತಿ" ಶಬ್ದಸಾರ. ಕೊಂಕು–ವಕ್ರೋಕ್ತಿ; "ಕೊಂಕುಶಬ್ದಃ ಕುಟಿಲವಚನಂ" ಶ. ಶಾ || 372ವ್ಯಾ. ಒಪ್ಪಂ. . . ಕುಂ– ಒಪ್ಪಹಾಕಿದ ಒಡವೆಯಂತೆ ಹೊಳೆಯುತ್ತಿರುವ ವಕ್ರೋಕ್ತಿಯೆಂದು ಅರ್ಥ. ಇನಿದಾದ–ಮಧುರವಾದ. ಬರ್ದುನುಡಿ ಪ್ರೌಢೋಕ್ತಿ. ತಳ್ತ–ಕೂಡಿಕೊಂಡಿರುವ; ಧಾ.ತಳ್. ಓಜೆ–ಗಾಢವಾದ ಪದನ್ಯಾಸಕ್ಕೂ, ಅರ್ಥದಲ್ಲಿನ ಪ್ರೌಢಿಗೂ ಓಜೆಯೆಂದು ಹೆಸರು. ನಿಲ್ವಿನಂ=ನಿಲ್+ವಿನಂ, ನಿಂತಿರಲು; ವಿನಂ, ವಿನೆಗಂ, ವನ್ನಂ, ವನ್ನೆಗಂ ಎಂಬ ಪ್ರತ್ಯಯಗಳು ಕ್ರಿಯೆಗೆ ಸೇರಿ ಮುಂದಿನ ಪೂರ್ವಕ್ರಿಯೆಯಲ್ಲಿ ಅನ್ವಯಿಸುತ್ತವೆ, ಎಂದು ಶ.ಶಾ.ಸೂ.588. ಎಂತಪ್ಪಂಗಂ–ಎಂದವನಿಗೂ. ಎಕ್ಕಸರಂ–ಏಕಾವಳಿ; ಶ. ಶಾ. ಸೂ. 375 ರ ಪ್ರಕಾರ ಸಮಾಸಮಾಡುವಾಗ ಪೂರ್ವಪದವು 'ಏಕ'ಶಬ್ದವಾಗಿ ಉತ್ತರಪದವು ವ್ಯಂಜನಾದಿಯಾದ ಸಂಸ್ಕೃತಪದವೇ ಆಗಲಿ, ಕನ್ನಡದ ಪದವೇ ಆಗಲಿ ಆಗಿದ್ದರೆ, 'ಏಕ'ಶಬ್ದಕ್ಕೆ ಎಕ್ಕಾದೇಶ ಬರುತ್ತದೆ; ಉ.ಎಕ್ಕಾಂಗ. ಕೊರಲ್ಗೊಳ್ಳದೇ–ಕಣ್ಣವನ್ನು ಅಲಙ್ಕರಿಸುವದಿಲ್ಲವೇ.

ವ್ಯಂಗ್ಯದಿಂದಲೂ, ಶಬ್ದಾಲಂಕಾರದಿಂದಲೂ, ಅರ್ಥಾಲಂಕಾರದಿಂದಲೂ, ಮನೋಹರವಾಗಿ ದೋಷರಹಿತವಾದ ಕಾವ್ಯವು ಮುಕ್ತಾಹಾರದಂತೆ ಯಾರ ಕಣ್ಠವನ್ನು ತಾನೆ ಅಲಙ್ಕರಿಸುವದಿಲ್ಲ? ಎಂದು ತಾತ್ಪರ್ಯಾರ್ಥ.

೬. ಪುರುಳುಂ–ಅರ್ಥಗಾಂಭೀರ್ಯವೂ, ಲಕ್ಕಣಮುಂ– ಉತ್ತಮಕಾವ್ಯಲಕ್ಷಣವೂ ಮೆಯ್ಸಿರಿಯುಂ–ಬಂಧಗೌರವವೂ. ತಳ್ತಿಸೆಯೆ–ಸೇರಿರಲು ಮನೋಹರವಾಗುವಂತೆ, ಹೇಳಿದ, ಕಾವ್ಯವು, ಪುರುಳುಂ–ಅನರ್ಘತೆಯೂ, ಲಕ್ಕಣಮುಂ–ಸುಲಕ್ಷಣವೂ, ಮೆಯ್ಸಿರಿಯುಂ–ಕಾನ್ತಿಯೂ, ತಳ್ತೆಸೆವ–ಕೂಡಿರಲು ಪ್ರಕಾಶಿಸುವ, ರತ್ನದಂತೆ, ಎಂತುಂ–ಸರ್ವಪ್ರಕಾರದಲ್ಲಿಯೂ, ಎರ್ದೆವುಗದೆ–ಹೃದಯಙ್ಗಮವಾಗುವದಿಲ್ಲವೆ?

೭. ಒಳ್ಪಿನ -ಸೊಗಸಾದ; ಒಳ್ಳಿತರ ಭಾವಂ ಒಳ್ಪು. ಚದುರಂ—ಚಾತುರ್ಯವುಳ್ಳವನು. ನಲವಿಂ—ಸಂತೋಷದಿಂದ. ಕುಂದು (—ಕೊರತೆ) + ಅದು + ಏಂ + ಆದವುದೆ?

೮. ಕಬ್ಬಿಗ—ಕವಿ. ಉಱಿದರ್—ಮಿಕ್ಕವರು. ಕಡಂದುಱು—ಕಣಜದ ಹುಳು.

೯. ಎಱಗುವಂ—ನಮಸ್ಕರಿಸುವನು; ಧಾ. ಎಱಗು, ಪ್ರಣತೇ. ಅರುಹ—ದ್ಭ. ಅರ್ಹತ್, ಜಿನ. ಓದು—ವಿದ್ಯೆ. ಪೆಱವೆಣ್—ಪೆಱತು + ಪೆಣ್, ಪರಸ್ತ್ರೀ. ಶ. ದ. 177. ನೆರೆದು—ಧಾ. ನೆರೆ, ಸಂಯೋಗೇ. ಲೆಕ್ಕಿಗರ ಪಿರಿಯ—ಮೇ || ರೈಸ್ ಸಾಹೇಬರವರು ಶಾನುಭೋಗರಲ್ಲಿ ದೊಡ್ಡವನೆಂದು ಅಭಿಪ್ರಾಯಪಡುವಂತೆ ತೋರುತ್ತದೆ. ಆದರೆ "ಲಕ್ಕಿಗ" ಎಂಬುದು 'ಸಂಖ್ಯಾವಾನ್' ಎಂಬ ಸಂಸ್ಕೃತದ ಪ್ರತಿ ಪದವೆಂದೂ, ಆದುದರಿಂದ ವಿದ್ವಾಂಸನೆಂಬ ಅರ್ಥವನ್ನು ಕೊಡುತ್ತದೆಯೆಂದೂ ಕೆಲವರು ಅಭಿಪ್ರಾಯಪಡುತ್ತಾರೆ.

೧೦. *(ಇವರು) ಅಱಿವರೊಳ್, ಅಕ್ಕರಕ್ಕೆ—ವಿದ್ಯೆಯಲ್ಲಿ, ದಿಮ್ಮಿದರ್—ಪ್ರೌಢರು; ನುಡಿಯೊಳ್ ಕಡುಜಾಣರ್; ಅಂದದೊಳ್—ಸೌನ್ದರ್ಯದಲ್ಲಿ, ಪೊಮ್ಮಿದರ್—ಹೆಚ್ಚಾದವರು; ಒಂದಿ ನಿಂದ ಸಿರಿಯೊಳ್, ಪಿರಿಯರ್ಗೆ, ಎಡೆಗೊಟ್ಟು—ಅವಕಾಶವನ್ನು ಕೊಟ್ಟು, ಅಂದರೆ, ತಮ್ಮ ಐಶ್ವರ್ಯವನ್ನು ಇತರರೊಡನೆ ಅನುಭವಿಸುತ್ತಾ ಬಾಳುವರು, ಎಂದುಂ, ಮುಳಿವರ್ಗೆ—ಕೋಪಿಷ್ಟರಲ್ಲಿ ಆತನ ಮಕ್ಕಳೆನಿಪ್ಪ ಸಾಂತನೂ, ಗುಮ್ಮಟನೂ, ವೈಜಣನೂ, ಮುಳಿಯರ್—ಕೋಪಿಸಿಕೊಳ್ಳರು. ಅಕ್ಕರಕ್ಕೆ—ಎಂಬಲ್ಲಿ ಚತುರ್ಥಿಯು ಸಪ್ತಮ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಶ.ದ.136

೧೧. ನೋಱ್ಪೊಡೆ—ನೋಡು + ಪೊಡೆ, ನೋಡಿದರೆ. ಇಲ್ಲಿ ಧಾತ್ವಂತ್ಯದ 'ಡು' ಱುವಾಗಿದೆ; ಮತ್ತು ಱದ ಮುಂದಣ ವ ಪ ಆಗಿದೆ. ಶ.ಶಾ.82, 514ನೆಯ ಸೂ. ಚೆಲ್ವುವರಿವ —ಚೆಲ್ವು + ಪರಿವ, ಸೌನ್ದರ್ಯಪ್ರಸರವುಳ್ಳ. ಎಳೆವೆಣ್ಡಿರ್—ಎಳದು + ಪೆಣ್ಡಿರ್, ದುಗುಲ—ದ್ಭ. ದುಕೂಲ. ತಳೆವುದು—ಧರಿಸುವದು. ಎಟ್ಟಿರಂ—ಆಧಿಕ್ಯ; ಹೊಸಗನ್ನಡದ ರೂಪ, ಎತ್ತರ.

ಹೀಗೆ ಕವಿಗಳು ತಮ್ಮ ಸೌಂದರ್ಯಾತಿಶಯವನ್ನು ಹೇಳಿಕೊಳ್ಳುವ ಪದ್ಧತಿಯುಂಟು. ಕವಿಕಾಮನು ಶೃಂಗಾರರತ್ನಾಕರದಲ್ಲಿ "ಚಳದಳಕದಲಸಗಮನದ| ಪೊಳೆವಧರದ ವಿಮಳನಖದ ಮೃದುಪದಗತಿಚಾ|| ಪಳನಯನದಂತನುಮಧ್ಯದ | ಲಲನಾಮುಖಲಕ್ಷ್ಯಲಕ್ಷಣಂಕವಿಕಾಮಂ ||" ಎಂದು ಹೇಳಿಕೊಂಡಿದಾನೆ. ಹೀಗೆಯೇ ಆದಿಸಂಪನೂ ಆದಿಪುರಾಣದಲ್ಲಿ ಪ್ರಥಮಾಶ್ವಾದಲ್ಲಿ ಹೇಳಿಕೊಳ್ಳುತ್ತಾನೆ.

೧೩. ಸಿರಿವೆಣ್-ಲಕ್ಷ್ಮಿ. ನಿಚ್ಚ-ದ್ಭ. ನಿತ್ಯ.

೧೪. ಗಿಳಿವಿಂಡು = ಗಿಳಿ + ಪಿಂಡು, ಗಿಳಿಗಳ ಗುಂಪು. ಮಿಳಿರ್ದಾಡುವ-ಸಂಚರಿಸುವ; ಧಾ. ಮಿಳಿರ್, ಸ್ಪಂದನೇ ಬಂಬಲ್-ಸಮೂಹ. ಶೊಂಗಲ್—ಗುಚ್ಛ. ನಡೆನೋಡುವ—ನಾಟಿಕೊಳ್ಳುವಹಾಗೆ ನೋಡುವ; ಭಾವಗರ್ಭಿತವಾದ ದೃಷ್ಟಿಯಿಂದ ನೋಡುವ, ಇಲ್ಲಿ ನಡೆ = ನಡು + ಸತ್ಯರ್ಥದ 'ಎ'. ಪೊರೆದು-ಸವರಿಕೊಂಡು, ಪ್ರ. "ಕುಮುದರಜಂಗಳೊಳ್ ಪೊರೆದು" ಕಾದಂಬರಿ ೬೩೩. ತೀಡುವ-ಬೀಸುವ; ಭಾವನಾಮ, ತೀಟ. ತೆಂಬೆಲರ್ = ತೆಬ್ಕಣ + ಎಲರ್, ದಕ್ಷಿಣಮಾರುತ, ಅಂದರೆ ಮಲಯಮಾರುತ; ಶ.ದ. 176. ತಿಙ್ಗಳ್—ಚಂದ್ರಿಕೆ. ಸೋಲಿಸದೆ-ಮೋಹಪಡಿಸದೆ.

೧೫. ಸಕ್ಕದ-ದ್ಭ. ಸಂಸ್ಕೃತ. ಬಗೆಗೊಳೆ—ಹೃದಯಂಗಮವಾಗುವ ಹಾಗೆ. ಆರ್ಪರ್-ಸಮರ್ಥರಾಗರು. ಇನಿತುಂ—ಸ್ವಲ್ಪವೂ. ಸಲೆ—ಚೆನ್ನಾಗಿ; ಇದು ಸಲ್ ಸಮಾಖ್ಯಾತೌ ಎಂಬ ಧಾತುವಿನ ಸತಿ ಸಪ್ತಮಿಯ ರೂಪ; ಇದನ್ನು ಕ್ರಿಯಾವಿಶೇಷಣವಾಗಿ ಸಾಧಾರಣವಾಗಿ ಪ್ರಯೋಗಿಸುತ್ತಾರೆ: ಇದರಂತೆಯೇ ಮಿಗೆ, ಎಯ್ದೆ, ಒಗುಮಿಗೆ ಮೊದಲಾದವುಗಳನ್ನು ಪ್ರಯೋಗಿಸುವದುಂಟು. ಪೆಂಪು-ಉನ್ನತಿ; ಶ.ದ. 212. ಬಲ್ಮು-ಪರಾಕ್ರಮ. ದೊರೆಕೊಂಡುದು-ಧಾ. ದೊರೆಕೊಳ್, ಪ್ರಾಪ್ತೌ.

೧೬. ನಾನ್—ಕೆಲವರು ಈ ರೂಪವಿಲ್ಲವೆಂದು ಹೇಳುತ್ತಾರೆ. ಆದರೆ ಈ ರೂಪವುಂಟು (ಶ. ಶಾ. ೨೮೮ ರ ವ್ಯಾಖ್ಯಾನವನ್ನು ನೋಡಿ) ಪ್ರ.

> "... ಸಂದೇಹವಿದೇಕೆ ಪೇೞ್ಪೋಗಿ ನಾವಲ್ಲಿಯೆ ದಿಟಮದು ತಾನೆಂಬುದಂ ನೋೞ್ಪಮಲ್ತೇ" ಕಾದಂಬರಿ. ೩೮೯.

ಅಚ್ಚಗನ್ನಡ-ಕವಿಯು ಅಚ್ಚಗನ್ನಡದಲ್ಲಿಯೇ ಈ ಕಾವ್ಯವನ್ನು ಬರೆದಂತೆ ಹೇಳಿದ್ದರೂ, ಸಮಸಂಸ್ಕೃತಪದಗಳೂ, ತದ್ಭವ ಪದಗಳೂ ವಿಶೇಷವಾಗಿ ದೊರೆಯುತ್ತವೆ.

೧೭. ಸಿಂಗರ—ದ್ಭ. ಶೃಂಗಾರ, ಸೌಂದರ್ಯ. ದೇಸೆ—ವಿಲಾಸ. ಪೊದಳ್ದಿರೆ—ಪ್ರಖ್ಯಾತವಾಗಿರಲು; ಧಾ. ಪೊದಳ್. ಡಾಳಂ—ಕಾಂತಿ. ಗೆಡೆಗೊಂಡು—ಚೆನ್ನಾಗಿ ಸೇರಿಕೊಂಡು: ಗೆಡೆ—ಸ್ನೇಹ; ಪ್ರ. 'ಗೆಡೆವಕ್ಕಿ'; ಇದಕ್ಕೆ ಗೆಳೆ, ಕೆಳೆ ಎಂಬ ಎರಡು ರೂಪವುಂಟು. ಬೀರ—ಪರಾಕ್ರಮ. ಪರಿಗೊಂಡುದು—ಪ್ರವಹಿಸಿತು.

೧೮. ಬೆಂಚೆ—ಅಲ್ಪಸರಸ್ಸು. ನೀರ್ವೂ = ನೀರ್ + ಪೂ, ತಾವರೆ. ಮುಸುಱಿ—ಮುತ್ತಿ; ಧಾ. ಮುಸುಱು, ಸಂಭಕ್ಷ್ಣೇ. ಬಟ್ಟೆವಿಡಿದು—ಮಾರ್ಗವನ್ನು ಹಿಡಿ

ದು. ಎಡೆಯಾಡುವ-ಸಂಚರಿಸುವ. ಸಬರಿ—ದ್ಭ. ಶಬರೀ, ಬೇಡರ ಹೆಂಗಸು. ಏಡಿಸುವ-ಹಾಸ್ಯಮಾಡುವ, ಇದಕ್ಕೆ ರೂಪಾನ್ತರ ಏಡಿಸುವ. ಬಯಲ್—ಗದ್ದೆ. ಪೊನಲ್—ಪ್ರವಾಹ. ಬೆಳೆಗೆಯ್—ಪೈರುಳ್ಳ ಗದ್ದೆ. ಸೋವ-ಓಡಿಸುವ. ನಾಡಗಾಡಿಕಾರ್ತಿಯರ-ನಾಡಿನ ವಿಲಾಸವತಿಯರ. ಆಗಸ-ದ್ಭ. ಆಕಾಶ. ಬಟ್ಟೆಗ—ಮಾರ್ಗಸ್ಥ. ಗರಗರಿಕೆ—ಸೊಗಸು. ಮೇಲೂರ್—ಸ್ವರ್ಗ. ಮುಂಡಾಡು-ಮುದ್ದಿಸು. ಅರಗಿಳಿ=ಅರಸು+ಗಿಳಿ, ರಾಜಶುಕ. ಶ.ದ. 177. ಬಗ್ಗಿಪ— ಧ್ವನಿಮಾಡುವ; ಭಾವರೂಪ ಬಗ್ಗಣೆ; ಧಾ. ಬಗ್ಗಿಸು.

೧೯. ಪಲವುಂ ನಾಲಗೆಯುಳ್ಳವಂ-ಆದಿಶೇಷ. ಮತ್ತಿನ-(ಅವ್ಯಯ); "ಮತ್ತಿನ-ಇತರಾರ್ಥ8" ಶ.ಶಾ.20ವ್ಯಾ. ಮಾನಿಸ-ದ್ಭ. ಮಾನುಷ. ಕಾಲೂರ್—ಹಳ್ಳಿ.

೨೦. ಮುಗಿಲ್—ಮೇಘ. ಓಳಿ—ಗುಂಪು. ಹಳ್ಳಿಗಳೆಲ್ಲವೂ ಪಟ್ಟಣಗಳಂತೆ ಸಮೃದ್ಧವಾಗಿಯೂ, ಕೆರೆಗಳೆಲ್ಲವೂ ಮೇಘಗಳಂತೆ ಜಲಭರಿತಗಳಾಗಿಯೂ, ಕಾಡುಗಳೆಲ್ಲವೂ ಉದ್ಯಾನವನಗಳಂತೆ ವಿಹಾರಾನುಕೂಲಗಳಾಗಿಯೂ ಇದ್ದವು; ಅಂದರೆ ಆ ದೇಶವು ಒಳ್ಳೆಯ ಸ್ಥಿತಿಯಲ್ಲಿ ಇತ್ತೆಂದು ತಾತ್ಪರ್ಯ.

೨೧. ಸಂಪಗೆ-ದ್ಭ. ಚಂಪಕಾ. ದಾಳಿಂಬ-ದ್ಭ. ದಾಡಿಮ. ಚೆಂದೆಂಗು=ಕೆಚ್ಚನೆ+ತೆಂಗು; ಶ.ದ.182. ಕೌಂಗು—ಅಡಕೆಯ ಮರ. ಉತ್ತಮವಾದ ಮರಗಿಡಗಳೇ ಪ್ರಬಲವಾಗಿದ್ದುವೆಂದು ತಾತ್ಪರ್ಯ.

೨೨. ಅಡರ್ದು—ಹತ್ತಿ. ಕಡುಪು—ಕೊಬ್ಬು. ಈಡಾಡೆ-ಬೀಸಾಡಲು. ಓವುತ್ತುಂ—ಪಾಲಿಸುತ್ತಾ.

೨೩. ಉರ್ಕಿ-ಹೆಚ್ಚಾಗಿ. ಕಾಲ್—ಪಾದ, ಕಾಲುವೆ. ಕಲಿವೆ-ದ್ಭ. ಕಲಮಾ, ನೆಲ್ಲು, ಬತ್ತದ ಬೆಳೆ.

೨೪. ಪೋರ್ವ—ಹೋರಾಡುವ. ಎಯ್ದುಣ್ಮುವ=ಎಯ್ದೆ+ಉಣ್ಮುವ, ವಿಶೇಷವಾಗಿ ಏಳುವ. ಸೀರ್ಪನಿ—ಸಣ್ಣ ಸಣ್ಣ ಹನಿ; ಹೀಗೆಯೇ 'ಸೀರ್ದುಪ್ಪುಳಿ', 'ಸೀರ್ಕರಡಿ', ಇತ್ಯಾದಿ. ಇಲ್ಲಿ ಶೈತ್ಯ ಸೌರಭ್ಯ ಮಾಂದ್ಯಗಳೆಂಬ ವಾಯುವಿನ ಮೂರು ಗುಣಗಳನ್ನೂ ಹೇಳಿದಂತಾಗುವದು.

೨೫. ಕೀಲಿ—"ಕೆಳಗಿನೊಳ್ಕುದುಗೆವಾಯೊಳಗಿರ್ಪಕರ್ಬುನದೊಳು |
ಮೇಲಲ್ಲದವನೊಳುತ್ಪಾಟನದೊಳಂ ಕೀಳು." ಕ. ಶ. ೧೧೫.
ಕವರ್—ಅಪಹರಿಸು; ಹಗ್ಗ. ಬಂದಿ—ಸೆರೆ; ಆಭರಣ. ತೊಡವು—ಆಭರಣ. ಏರ್—"ಆರೋಹಣದೊಳು ಗಾಯದೊಳೇರು" ಕ. ಶ. ೧೧೭. ಮಡಿ—ಸಾಯುವದು; ಪಾತೆ. ಮೊರ್ಕೆ—ಮೊರೆಯಿಡುವಿಕೆ, ನಂಟು; ನಂಟು ಎಂಬ ಅರ್ಥದಲ್ಲಿ "ತಾಯ್ಮೊರೆ, ತಂಗಿವೊರೆ" ಎಂದು ಪ್ರಯೋಗವಿದೆ. ಪೊಡೆ—ಹೊಡೆ

ಯುವಿಕೆ, ತಿನ. ಕೞಿ– "ಕಳಂಕಿನೊಳ್ ಕ್ಷೀರದೋಹನದನಲ್ಲಿ ಕೞಿ" ಕ.ಶ. ೧೧೭. ತುಱುಗಾರ್ತಿ–ಹಸುವನ್ನು ಕಾಯುವವಳು. **ಪಿಡಿ**–ಬಲಾತ್ಕಾರದಿಂದ ಹಿಡಿಯುವದು; ಹೆಣ್ಣಾನೆ.

೨೬. ಪುದಿದ–ವ್ಯಾಪ್ತವಾದ; ಧಾ. ಪುದಿ, ಆಚ್ಛಾದನೇ ಅವಲ್–"ಅವಲೆಂದು ಚೆನ್ನೈಯ್ದಿಲೆ" ಶಬ್ದಸಾರ. ಬಂದಮಾವು– "ಫಲಿತರಸಾಲ." ಶಬ್ದಸಾರ. ತೊೞಿ–ಹೊಳೆ. ಅಂಚೆ- ದ್ಭ.ಹಂಸ. ಬೆಲೆವೆಣ್–ಪಣ್ಯಸ್ತ್ರೀ, ಸೂಳೆ.

೨೮. ಕರುವಾಡ–ಉಪ್ಪರಿಗೆ. ಬೆಟ್ಟು–ಬೆಟ್ಟ, ಪರ್ವತ. ಮುನ್ನೀರ್–ಸಮುದ್ರ.

೨೯. ಮಿಸುಪ–ಮಿಸುಗುವ, ಹೊಳೆಯುವ; ಶ.ದ.232 **ಕಾವಣ**—ದ್ಭ. ಕಾಯುಮಾನ, ಚಪ್ಪರ.

೩೦. ಬಿಜ್ಜೋದರ–ದ್ಭ. ವಿದ್ಯಾಧರ. ಎಸಗುವ—ಬೀಸುವ. **ಅಸಿಯಕೊಂಬು**=ಅಸಿದು+ಕೊಂಬು, ಸಣ್ಣ ಕೊಂಬೆ. ಇಮ್ಮಾವು=ಇನಿದು+ಮಾವು, ರಸಾಲ. ಒಲ್ದು–ಧಾ. ಒಲ್, ಸ್ನೇಹೇ. ತುಱುಸೆಱೆವಿಡಿವ–ಹಸುವನ್ನು ಸೆರೆ ಹಿಡಿಯುವ ಹಾಗೆ ಹಿಡಿದುಕೊಳ್ಳುವ. ನಱುಗಂಪು–ಸುವಾಸನೆ; ಪ್ರ. 'ನಱುಸುಯ' 'ನಱುನೆಯ' ರಯ್ಯ -ದ್ಭ. ರಮ್ಯ. ಸೊಂದಿಗೋಡಗ—"ಪೇರಣಿಲ್" ಚತುರಾಸ್ಯ. ತಿಂತಿಣಿವಣ್ಣನಾಂತ–ಜೊಂಪಲು ಜೊಂಪಲಾಗಿರುವ ಹಣ್ಣುಗಳುಳ್ಳ. ನಟ್ಟನಡು=ನಡು+ನಡು. ಶ.ದ.181

೩೧. ನುಣ್ಚರ=ನುಣ್ಣಿತ್ತು+ಸರ(ದ್ಭ. ಸ್ವರ), ನುಣುಪಾದ ಧ್ವನಿ; ಶ.ದ. 179, ಶ.ದ.68. ಅೞಲಂ–ವ್ಯಥೆಯನ್ನು.

೩೨. ಪೊರೆದೋಱುವ— ವಿಕಸಿಸುವ.

೩೩. ಇಂಚರ=ಇನಿದು+ಸರ, ಮಧುರಧ್ವನಿ. ನಲ್ಲರ—ಪ್ರಿಯರ. ನೀಳ್ದ–ದೀರ್ಘವಾದ. ಸೇದೆಯುಂ ಸೆಳೆದು–ಶ್ರಮವನ್ನು ಹೋಗಲಾಡಿಸಿ.

೩೪. ವಿಳಸ -ದ್ಭ. ವಿಲಾಸ.

೩೫. ತಣ್ಗಂಪು=ತಣ್ಣಿತ್ತು+ಕಂಪು, ತಣ್ಣಗಿರುವ ವಾಸನೆ. ವಂಗಡ–ಗುಂಪು. ಜಾಣ್–ಜಾಣತನ. ಅರವೆಂಡಿರ್=ಅರಸು+ಪೆಣ್ಡಿರ್, ರಾಜಸ್ತ್ರೀ. ಪೊಗೞ್ವರ+ಓದಂ–ಸ್ತೋತ್ರವನ್ನು+ಕೇಳ್ವ+ಕೂರಾಳ್ಗಳಿಂ–ಭಟರಿಂದ.

೩೬. ಪಚ್ಚೆವರಲ್=ಪಚ್ಚೆ+ಪರಲ್, ಪಚ್ಚೆಯೆಂಬ ರತ್ನ: ಪರಲ್–ಕಲ್ಲು; ಪ್ರ. 'ಆಲಿವರಲ್' 'ಕೆಂಬರಲ್' ಹೊಸಗನ್ನಡದಲ್ಲಿ ಹರಳು, ಉ. ಸುಣ್ಣದ ಹರಳು. ಕುಳಿಸ–ದ್ಭ. ಕುಲಿಶ, ವಜ್ರ, ವಜ್ರವೆಂಬ ರತ್ನ. ನುಣ್ಗದಿರ್=ನುಣ್ಣಿತ್ತು+ಕದಿರ್, ನುಣುಪಾದ ಕಾನ್ತಿ. ಇಂದಿರವಿಲ್ಲು–ಇಂದ್ರಧನಸ್ಸು: ಇದನ್ನೇ ಕಾಮನ ಬಿಲ್ಲೆಂದೂ, ಮಳೆಯ ಬಿಲ್ಲೆಂದೂ ಕರೆಯುತ್ತಾರೆ. ಇಂದಿರ–ದ್ಭ.

ಇಂದ್ರ. ಪಾಂಗು—ರೀತಿ. ಎನಸುಂ—ವಿಶೇಷವಾಗಿ. ಬಾಂಬಟ್ಟೆ=ಬಾನ್+ಬಟ್ಟೆ, ಅನ್ತರಿಕ್ಷಮಾರ್ಗ. ರನ್ನವಸರ—ರತ್ನದ ಹಸರ, ರತ್ನಗಳ ಅಂಗಡಿ.

೩೭. ಸಂಕೆ—ದ್ಭ. ಶಂಕಾ, ಭ್ರಾನ್ತಿ. ಕಂಚು—ದ್ಭ. ಕಾಂಸ್ಯ.

೩೮. ಪಟಿ—ನಡುವಿಗೆ ಕಟ್ಟಿಕೊಳ್ಳುವ ಪಟ್ಟೆಯ ಬಟ್ಟೆ. ತಳಿರ್ವಟ್ಟೆ—ಚಿಗರ ಹಾಗೆ ಕೆಂಪಾದ ಬಟ್ಟೆ. ಮಳಿಗೆ—ದ್ಭ. ಮಠಿಕಾ. ಸೀರೆವರದರ್—ಸೀರೆಯ ಪರದರ್, ವ್ಯಾಪಾರಿಗಳು.

೪೦. ಎತ್ತೆ—ಧಿಕ್ಕರಿಸಲು. ಸೆಳ್ಳುಗುರ್—ಸೂಕ್ಷ್ಮವಾದ ನಖ. ಕುತ್ತೆಸಳ್=ಕಿಱಿದು+ಎಸಳ್; ಸ್ವರಾದಿಯಾದ ಉತ್ತರ ಪದದೊಡನೆ ಸಮಾಸವಾದಾಗ, 'ಕಿಱಿದು' ಎಂಬ ಪದಕ್ಕೆ 'ಕಿತ್ತು' 'ಕುತ್ತು' ಎಂಬ ಆದೇಶಗಳು ಬರುತ್ತವೆ. ಉ. ಕಿತ್ತಡಿ, ಕುತ್ತಡಿ, ಕಿತ್ತೀಳೆ. ಶ.ದ 181

೪೧. ಪುಲ್ಲವಡಿಗಿತಿ—ಹೂವಾಡಗಿತ್ತಿ.

೪೨. ಗರುವರ್—ದೊಡ್ಡವರು. ಗೊಷ್ಟಿ—ದ್ಭ. ಗೋಷ್ಠೀ. ಅಕ್ಕರಿಗ—ಅಕ್ಷರಜ್ಞ, ಪಂಡಿತ. ಸಂದ—ಪ್ರಖ್ಯಾತವಾದ; ಸಲ್ ಎಂಬುದರ ಭೂತರೂಪ, ಶ.ದ 237. ಜೋಡೆ—ಸ್ವೈರಿಣಿ. ಬಂದರ್—ಧಾರ್ಷ್ಟ್ಯವುಳ್ಳವರು; "ಬಂಡು ಧಾರ್ಷ್ಟ್ಯೇ" ಶ.ಶಾ.ವ್ಯಾ. ಬರೆಗಾರ್—ಚಿನ್ನದ ಬರೆಯನ್ನು ನೋಡುವವರು.

೪೩. ತುಡು—ಧರಿಸು; ಈ ಧಾತುವಿನಿಂದ ಹುಟ್ಟಿದ್ದು, 'ತೊಡವು'—ಆಭರಣ. ಸೌರಿ—ದ್ಭ. ಶೌರಿ, ಕೃಷ್ಣ. ಅಟ್ಟಿದ—ಕಳುಹಿದ; ಪ್ರ. 'ಬಳಿಯಟ್ಟು'. ಚಂದ್ರಾದಿಗಳಿಗೂ ಕೂಡ ಆ ವೇಶ್ಯೆಯರು ಮೋಹನಕರರಾಗಿದ್ದರೆಂದು ತಾತ್ಪರ್ಯ.

೪೪. ಇಟ್ಟಣ—ಶೋಭೆ; ಇದರ ರೂಪಾನ್ತರ, ಇಟ್ಟಳ. ಪೊಂಬೆಸೆದ—ಪೊನ್ನಬೆಸದ, ಚಿನ್ನದ ಕೆಲಸಮಾಡಿರುವ. ಬಿಸವಂದ—"ಬಿಸವಂದಮೆಂದು ವಿಸ್ಮಯಾರ್ಥಂ" ಚತುರಾಸ್ಯ. ಗೋಸ—ದ್ಭ. ಘೋಷ. ಇಂದಿರನಪೊೞಲ್—ಅಮರಾವತಿ. ಆ ಪಟ್ಟಣವು ಸರ್ವಸಂಪತ್ಸಮೃದ್ಧವಾಗಿತ್ತೆಂದು ತಾತ್ಪರ್ಯ.

೪೬. ಎಳೆ—ದ್ಭ. ಇಳಾ, ಭೂಮಿ. ಸರಣ್—ದ್ಭ. ಶರಣ, ರಕ್ಷಕ. ಚಾಗ—ದ್ಭ. ತ್ಯಾಗ, ದಾನ. ಎಸಕ—ಕೆಲಸ. ಅಲಂಪು—ಆಧಿಕ್ಯ; ಮತ್ತೊಂದರ್ಥ ಸಂತೋಷ. ತಕ್ಕರ್—ಯೋಗ್ಯರು; ಧಾ. ತಗು—ಈ ಧಾತುವಿಗೆ ಹೊಸಗನ್ನಡದಗ ಪ್ರಯೋಗವಿಲ್ಲ; ಆದರೆ ತಕ್ಕದ್ದು,' 'ತಕ್ಕ' ಎಂಬ ರೂಪಗಳು ಮಾತ್ರ ಪ್ರಚಾರದಲ್ಲಿವೆ. ಬಲದೋಳ್ದಲೆ—ದಕ್ಷಿಣಭುಜಶಿರಸ್ಸು.

೪೭. ಇರ್ಕೆವನೆ—ವಾಸದಮನೆ. ಉಗ್ಗಡ—ದ್ಭ. ಉತ್ಕಟ. ಅಧಿಕ.

೪೮. ಅಡಸಿ—ಬಲಾತ್ಕಾರದಿಂದ ಪ್ರವೇಶಿಸಿ. ಮುಗುಳ್ಗಣೆ—ಪುಷ್ಪಬಾಣ ಮೊನೆ—ಯುದ್ಧ.

೪೯. ಪಡಿವೊಗ—ದ್ಭ. ಪ್ರತಿಮುಖ, ಅಭಿಮುಖ; ಪ್ರ." ಪಡಿವೊಗಮಾದಾ ಬಿದಿಯಾ| ಯೆಡೆಯಿಂತದೇಗುಮೆಳಸಿದರ್ದ ಮನುಜಂದಿಂ" ಮಿತ್ರವಿಂದಾಗೋ ವಿಂದ. ಬಾಳ್—ಕತ್ತಿ; "ಬಾಳಿ, ಜೀವನೇ; ಖಡ್ಗೇ ಕುಳಂ" ಶ.ದ. ಪು. 331

೫೦. ಕಡುಗಲಿ— ಮಹಾಬಲಶಾಲಿಯಾದ. ಬೆಳ್ಗೊಡೆ— ಶ್ವೇತಚ್ಛತ್ರ; ಅರ್ಥಾಂತರ ಹೀನವಾದ ಕೊಡೆ; ಪ್ರ. "ಬೆಳ್ಳಕ್ಕರಿಗ"=ಅರಸಿಕ, "ಬೆಳ್ಪ"= ಬೆಪ್ಪ. ಅಣಂಬೆ—ಅಣಬೆ, ನಾಯಿಕೊಡೆ. ಮನ್ಮಥನು ರಾಜಾಧಿರಾಜನಾ ಗಿದ್ದನೆಂದು ತಾತ್ಪರ್ಯ.

೫೧. ಸಿರಿ—ಐಶ್ವರ್ಯ; ಕಾಂತಿ; ಲಕ್ಷ್ಮಿ; ಪೊಡೆಯುಲರ—ಪದ್ಮನಾಭ; ಕಾಯ್ಪು— ಪರಾಕ್ರಮ; ಕ್ರೌರ್ಯ; ಔಷ್ಣ್ಯ. ಬಿಸುಗದಿರ—ಸೂರ್ಯ; ಉತ್ತರಪದವು ವ್ಯಂಜ ನಾದಿಯಾಗಿದ್ದರೆ, 'ಕಿಜ್ಜನೆ' 'ಬಿಜ್ಜನೆ' ಎಂಬವಕ್ಕೆ 'ಕಿಸು,' 'ಕೆಂ,' 'ಬಿಸು,' 'ಬೆಂ' ಎಂಬ ಆದೇಶಗಳು ಕ್ರಮವಾಗಿ ಬರುತ್ತವೆ. ಉ. ಕಿಸುಸೆರೆ, ಕೆಂಗಲ್, ಬಿಸುಗಲ್, ಬೆಂಗದಿರ. ಸರ—ಬಾಣ; ಹಾರ. ಅಳವಟ್ಟು—ಇಲ್ಲಿ ಕೂಡಿಕೊಂ ಡಿದ್ದಾಗ್ಯೂ. ಪಾರ್ವರ್—ಬ್ರಾಹ್ಮಣರು, ಹೊಸಗನ್ನಡ, ಹಾರುವರು. ಮಡ— ಗುಲ್ಫ; ದ್ಭ. ಮಠ, ಪಾಠಶಾಲೆ; ಕಡಾಣಿ, ಶ.ಶಾ.315 ವ್ಯಾ. ಮಿಾನ್—ಧ್ವಜ ದಲ್ಲಿರುವ ಮತ್ಸ್ಯ, ನಕ್ಷತ್ರ, ಮತ್ಸ್ಯ. ಕೋಡುಗೈ—ಕೋಡಿನಕೈ, ದಾನದಕೈ; ಶಾಖೆ; ಸೊಂಡಿಲಲ್ಲಿಟ್ಟುಕೊಂಡಿರುವ ಶಾಖೆ.

೫೩. ತಾಱಿ—ಕಾರ್ಶ್ಯವನ್ನು ಹೊಂದಲು, ಪಗಲಾಣ್ಮ—ದಿನೇಶ, ಸೂರ್ಯ. ಚೆಚ್ಚ ರ—ವೇಗ. ಆಱಿ—ಒಣಗಿ ಹೋಗಲು. ಅದಿಮುರ್ಗ್ತೆ—ವಸಂತದೂತಿಯೆಂಬ ಲತೆ; ಇದು ಸಹಜ ಶಿಥಿಲ. ಪೇಱಿ—ಹೊತ್ತಿರಲು; ಹೊಸಗನ್ನಡ, ಹೇರು.

೫೪. ಕಿಱುವೆಟ್ಟು= ಕಿಱಿದು+ಬೆಟ್ಟು, ಗುಡ್ಡ. ಬೊಬ್ಬುಳಿ—ದ್ಭ. ಬಬ್ಬೂರ, ಗೊಬ್ಬಳೀಮರ. ಸಿರಿಕಂಡ—ದ್ಭ. ಶ್ರೀಖಂಡ, ಗಂಧ. ಒಕ್ಕ—ಧಾ. ಉಗು, ವಿಸರ್ಜನೇ. ಕಿಬ್ಬಿರಿ= ಕಳಗು+ಬರಿ ಪರ್ವತಪ್ರಾಂತ; ಹೊಸಗನ್ನಡ, ಕಿಬ್ಬರಿ. ಅಸುಗೆ—ದ್ಭ. ಅಶೋಕ. ಪೊಂಪುಳಿ-ಅಧಿಕ; ಮತ್ತೊಂದರ್ಥ ಪುಳಕ ನಿಱಿಗಱಿ ಗಂಪು-ಒಂದು ವಿಧವಾದ ಆಟ. ದೂರಿಸುವ-ಚಿಂತಿಸುವ; "ದೂರಿಸಿದ ನೆಂದು ಸಲೆ ಚಿಂತಿಸಿದನಕ್ಕುಂ" ಕರ್ಣಾಟಕ ನಿಘಂಟು.೩೭. ನೀಱೆ—ಸುಂ ದರಸ್ತ್ರೀ. ನಿಡುಸುಯ್=ನಿಡಿದು+ಸುಯ್, ದೀರ್ಘವಾದ ಶ್ವಾಸ. ಬಟ್ಟ— ಗುಂಡಗಿರುವ; ಪ್ರ. "ಬಟ್ಟವೊಗ"; ಬಟ್ಟಿತು ಎಂಬ ಗುಣವಚನಕ್ಕೆ ಸಮಾಸ ದಲ್ಲಿ 'ಬಟ್ಟ' ಎಂಬ ಆದೇಶ ಬರುತ್ತದೆ. ತೋರಮುತ್ತಿನಾರ—ಸ್ಥೂಲಮುಕ್ತಾ ಹಾರ; ಆರ—ದ್ಭ. ಹಾರ. ಪಾಱುಬೋಜಂಗ=ಪಾಱುವ+ಬೋಜಂಗ (ದ್ಭ. ಭುಜಂಗ), ಚಂಚಲನಾದ ವಿಟ.

೫೫. ಬಿರಯಿ–ದ್ಭ. ವಿರಹಿ. ಪೋ–ಪೋಗು; ಪ್ರ. "ಪೋಮಾಣಿ್ನನ್ಯಕವಿಸ್ತು ತಿವ್ಯಸನಮಂ" ಕಾದಂಬರಿ, ೩. ಡಾಡೆ–ವಾದ್ಯವಿಶೇಷ. ಬಿಡಿ–ಹೀಚುಕಾಯಿ.

೫೬. ಪಾದರಿ—ದ್ಭ. ಪಾಟಲ. ಕಾಡುವ—ತೊಂದರೆ ಪಡಿಸುವ; ಇದರ ಭಾವ ನಾಮ, ಕಾಟ. ಇರ್ಕುಳಿಗೊಂಡುವು—ಸೆಳೆದುಕೊಂಡವು.

೫೭. ಕಾಪಂ–ರಕ್ಷಣೆಯನ್ನು. ಅವಿದತ್ತು—ಮುತ್ತಿಕೊಂಡವು.

೫೮. ನಡೆವಳಿಗೆ– ನಡತೆಯನ್ನು, ಪದ್ಧತಿಯನ್ನು; ದ್ವಿತೀಯಾರ್ಥದಲ್ಲಿ, ಚತುರ್ಥಿ.

೫೯. ನಿಮಿರ್ದ–ದೀರ್ಘವಾದ. ಅಣಂ–'ಏನುಮೆನಿಪ್ಪರ್ಧಮುನಿರ| ದಾನಿಪರಣ ಮಾಣಮೆಂದ್ಪು ನುಡಿವವ್ಯಯದೊಳ್.' ಶ.ದ.303 ಅಱಿಡಿ– ಷಟ್ಚರಣ, ಭ್ರಮರ. ಅಳಿಅ–ತೊಂದರೆ

೬೦. ಬಂಡು–ಮಕರಂದ; ಪ್ರ. 'ಬಂಡುಣಿ'–ಭ್ರಮರ. ಮೆಲ್ಸರಿ=ಮೆಲ್ಲಿತು+ ಸರಿ, ಸೋನೆ.

೬೧. ಎಱೆಯೆ–ಯಾಚಿಸಲು. ಗಾಣರ್–ದ್ಭ. ಗಾಯನರ್, ಗಾಯಕರು; ಪ್ರ. "ಅಮರರಗಾಣರ್ | ಪಾಡುವರೆನೆ" ಅಜಿನಾಥಪುರಾಣ. ೫.

೬೨. ಬಿಣ್ಪು–ಭಾರ; ಇದು ಬಿಣ್ಣಿತು ಎಂಬದರ ಭಾವನಾಮ, ಪ್ರ."ಕಣ್ಮಲರ್ಗೆ ಕಾಡಿಗೆ ಬಿಣ್ಣಿತು" ಕಾದಂಬರಿ, ಗುಜ್ಜು–ದ್ಭ. ಕುಜ್ಜ, ಚಿಕ್ಕದಾದ. ತನಿ ವಣ್=ತನಿತು+ಪಣ್, ಪಕ್ವವಾದ ಹಣ್ಣು, ಪ್ರ. 'ತನಿಗೆಂಡಂ,' 'ತನಿವೇಸಗೆ'. ಅಳ್ಳಿಗೊಂಬು–ಕ್ಷುದ್ರಶಾಖೆ.

೬೩. ಸುಗ್ಗಿ–ವಸಂತಕಾಲ. ತಳ್ವಿದಂ–ಸಾಾವಕಾಶಮಾಡಿವನು.ನಲ್ಲಂ–ಪತಿ.

೬೪. ಚೆನ್ನೆ–ಸುಂದರಸ್ತ್ರೀ. ಮೆಯ್ಗರೆದ–ಮರಸಿಕೊಂಡ.

೬೫. ಕಿನಿಸಿದಪೆ–ಕೋಪಿಸಿಕೊಳ್ಳುತ್ತೀಯೆ. ಕಾದಲನಿಲ್ಲದ ಪೆರ್ಗೆ–ಪ್ರಿಯನು ಇಲ್ಲದ ವೇಳೆಯಲ್ಲಿ.

೬೬. ತಲ್ಲಣ–ಭಯ.

೬೭. ಕೋಡುವ–ಶೀತಳವಾದ; ಧಾ. ಕೋಡು ಶೈತ್ಯೇ. ಕೊಂಚೆ–ದ್ಭ. ಕ್ರೌಂಚ. ಮೂಡುವ–ಉದಯಿಸವ; ಧಾ ಮೂಡು: ಈ ಧಾತುವಿಂದ ಹುಟ್ಟಿದುದು 'ಮೂಡಲು'. ಅಗಿವಳ್—ಧಾ. ಅಗಿ, ಭಯೇ.

೬೯. ಒರ್ಚರ=ಒಂದು+ಸರ, ಏಕಾವಳಿ. ಚುನ್ನವಾಡೆ– ನಿಂದಿಸಲು; 'ನಿಂದೆ ಚುನ್ನಮೆಲೆ ಚತುರಾಸ್ಯ' ಸೆಳೆಮಾವು=ಸೆಳೆಯಂತಪ್ಪ ಮಾವು, ಬೆತ್ತ ದಹಾಗೆ ಸಣ್ಣಗಿರುವ ಮಾವು. ತುಂಬಿವಾಡಂ—ತುಂಬಿಯ ಪಾಡಂ, ಭೃಂಗಗೀತವನ್ನು.

೭೦. ಪಂದರ–ಚಪ್ಪರ. ಮೆಯ್ವೆಂಕೆ–ಮೆಯ್ಯ ಬೆಂಕೆ, ಶರೀರತಾಪ. ಪತ್ತೆಸಾ ರ್ದು–ಹತ್ತಿರ ಹೋಗಿ.

೭೨. ನಗೆಗಾಱಿಂ— ಹಾಸ್ಯಗಾರ, ವಿದೂಷಕ· ಇಟ್ಟೆಡೆಯಂ ತೊಲಗಿಪೋಗೆ— ದೊಂಬಿಯಾಗದ ಹಾಗೆ ಹೊರಟು ಹೋಗಲು. ಕೆಲ–ಪಾರ್ಶ್ವ·

೭೩. ಕವರ್ವಂತೆ–ಅಪಹರಿಸುವ ಹಾಗೆ. ಇಂದಿನ—ಇಂದು ಎಂಬದರ ಷಷ್ಠಿ, ಈ ದಿನದ.

೭೪. ನಿಟ್ಟೆಸಳ್=ನಿಡಿದು+ಎಸಳ್, ದೀರ್ಘವಾದ ಕಮಲದ ಎಸಳು; ನಿಡಿಯ ಮೆಲ್ಲಡಿ=ನಿಡಿದು+ಮೆಲ್ಲಡಿ. 'ನಿಡಿದು' ಎಂಬ ಗುಣವಾಚಕವು ಸ್ವರಾದಿಯಾದ ಪದದೊಡನೆ ಸಮಾಸವಾದಾಗ ನಿಟ್ಟೆಂದೂ, ವ್ಯಂಜಂನಾದಿಯಾದ ಪದದೊಡನೆ ಸಮಾಸವಾದಾಗ 'ನಿಡು' ಅಥವಾ 'ನಿಡಿಯ' ಎಂದೂ ಆಗುತ್ತದೆ, ಉ. ನಿಡುದೋಳ್.

೭೫. ನೇರಿತು–ಸರಳವಾದ. ಓರಂತೆ—ಏಕರೂಪವಾದ, ಅದರ ಹಾಗೆ ಇರುವ. ಬಾರಿಸಿ--ಧಿಕ್ಕರಿಸಿ· ತೋರಣಗಂಬ— ತೋರಣವನ್ನು ಕಟ್ಟುವದಕ್ಕೋಸ್ಕರ ನೆಟ್ಟ ಕಂಬಗಳು·

೭೬. ತೆರೆ–ಅಲೆ· ಪೊರ್ಕುೞ್–ನಾಭಿ; ಹೊಸಗನ್ನಡದಲ್ಲಿ ಹೊಕ್ಕುಳು. ತೆಳ್ವಸಿಱ್=ತೆಳ್ಳಿತ್ತು+ಬಸಿಱ್, ಕೃಶೋದರ. ತಿವಳಿ–ದ್ಭ· ತ್ರಿವಳಿ.

೭೭. ಕುರುಳ್–ಕೂದಲು.

೭೮. ಪೊಱವಾಱ್–ಜಘನ. ಆರ್ತುವಿಲ್ಲ–ಸಾಮರ್ಥ್ಯವುಳ್ಳವುಗಳಾಗಿಲಿಲ್ಲ. ಕಡುಗುಣ್ಪನಾಳ್ದ–ಬಹಳ ಆಳವಾದ; ಗುಣ್ಪು–ಆಳ. ಅೞ್ದ–ಮುಳುಗಿದ, ಧಾ· ಆೞ್ ನಿಮಗ್ನೇ. ಶ. ಶಾ· ೪೭೮ನೆಯ ಸೂತ್ರದಿಂದ ಕೀೞ್, ಏೞ್, ಬೀೞ್, ಆೞ್, ಕಾಣ್, ಧಾತುಗಳಿಗೆ ದ, ದಪ ಪ್ರತ್ಯಯಗಳು ಪರವಾದರೆ, ಹ್ರಸ್ವಾದೇಶಬರುತ್ತದೆ· ಉ. ಕಿೞ್ತಂ, ಎೞ್ದಂ, ಬಿೞ್ದಂ, ಅೞ್ದಂ, ಕಂಡಂ ಇವುಗಳಂತೆ ಬಾೞ್ ಎಂಬುದಕ್ಕೂ ಆಗುತ್ತದೆ, ಉ. ಬೞ್ದಂ. ಬಾಸೆ–ರೋಮಾವಳಿ. ಬೆಟ್ಟಿತಪ್ಪ–ಕಠಿನವಾದ· ಕಪ್ಪು—ಆನೆ ಮೊದಲಾದ ಮೃಗಗಳನ್ನು ಹಿಡಿಯುವದಕ್ಕೆ ತೋಡಿದ ಹಳ್ಳ. ಎೞಕ–ಪ್ರೀತಿ; ಪ್ರ. "ಗಜೇಂದ್ರನ್ಪೊರೆಯನಾಲಿಸಿದಂದು ಕದುಬುಗೊಂಡು ನೀಂ ಭರದೊಳೊದವಿದ ಕೆಟ್ಟೞಕದವಂ" ಚಿಕದೇವರಾಜಬಿನ್ನಪಂ. ಪೆಱೆನೊಸಲ್–ಪೆಱೆಯಂತೆ ಚಂದ್ರನಂತೆ, ಮನೋಹರವಾದ, ನೊಸಲ್ ಹಣೆ. ಬಳ್ಳಿಗುರುಳ್–ಬಳ್ಳಿಯಂತೆ ಸುರಳಿಸುರಳಿಯಾಗಿರುವ ಕುರುಳು. ಕಣ್ಬಿವಲೆ–ಕಣ್ಬಿಯಬಲೆ, ಹಗ್ಗದ ಬಲೆ. ಕೆಡೆದ–ಬಿದ್ದ. ಎರಲೆ–ಹುಲ್ಲೆ.

೭೯. ಸುಲಿಪಲ್=ಸುಲಿದ+ಪಲ್, ಬೆಳಗಿದ ಹಲ್ಲು; ಪ್ರ· "ವನಿತೆ ವಿಳಾಸದಿಂ ಸುಲಿದ ದಂತಚಯಂ" ಪುಷ್ಪದಂತಪುರಾಣ. ಆ·ಗ. ಅಲರ್ಗಣ್—ಅಲರಂ

ತಪ್ಪ ಕಣ್. ತಿಸರ–ದ್ಭ. ತ್ರಿಸರ, ಮೂರೆಳೆಯ ಹಾರ.

೭೯. ಜೊನ್ನ–ದ್ಭ. ಜ್ಯೋತ್ಸ್ನಾ. ಬೆಳದಿಂಗಳು. ಪುತ್ತಳಿ–ದ್ಭ. ಪುತ್ರಿಕಾ, ಬೊಂಬೆ. ಬಿದುಗಲ್ಲು–ಚಂದ್ರಕಾಂತಶಿಲೆ: ಬಿದು–ದ್ಭ. ವಿಧು; ಕಲ್ ಎಂಬ ಶಬ್ದಕ್ಕೆ 'ಕಲ್ಲು' ಎಂಬ ರೂಪಾಂತರವುಂಟೆಂದು ಶಬ್ದಾನುಶಾಸನದಲ್ಲಿ ಹೇಳಿದೆ. ಸೊಂಪಳವಡೆ–ಸೌಂದರ್ಯವುಂಟಾಗಲು. ಪೂಸರ–ದ್ಭ. ಪುಷ್ಪಶರ, ಮನ್ಮಥ.

೮೧ ಇಂಬೆನೆ–ಮನೋಹರವಾಗಿರುವ ಹಾಗೆ.

೮೨. ಬಿತ್ತಿ–ದ್ಭ. ಭಿತ್ತಿ, ಗೋಡೆ. ಬಚ್ಚಿಸಿದ–ಬಣ್ಣಹಾಕಿದ; ಭಾವನಾವು, ಬಚ್ಚಣೆ. ಬಿನ್ನಪ–ದ್ಭ. ವಿಜ್ಞಾಪನ.

೮೩. ಬೇಟಂಗಳುಮಂ ತಳೆದು, ಇಂಚರದಿಂ ಬಗೆಗೊಳಿಪ, ಅಂಚೆಯ ನೆರವಿಗಳಂ ನೋಡು, ಎಂದು ಅನ್ವಯ. ನೆರವಿ–ಗುಂಪು.

೮೪. ಪರಿತರ್ಪ–ಬರುವ. ಜಕ್ಕವಕ್ಕಿ–ದ್ಭ. ಚಕ್ರಪಕ್ಷಿ, ಚಕ್ರವಾಕ. 'ನೋಡು' ಎಂಬ ಕ್ರಿಯೆಯನ್ನು ಅಧ್ಯಾಹಾರಮಾಡಿಕೊಳ್ಳಬೇಕು.

೮೬. ಎಱೆಯ–ಸ್ವಾಮಿ, ದೊರೆ.

೮೭. ತಂಬುಲ–ದ್ಭ. ತಾಂಬೂಲ.

೮೮. ಮಾಂಗಾಯ್–ಮಾವಿನಕಾಯ್; ಮಾವು ಶಬ್ದವು ಪೂರ್ವಪದವಾಗಿ ಉತ್ತರಪದವು ಮಕಾರಾದಿಯಾಗಿದ್ದರೆ ಸಮಾಸದಲ್ಲಿ ಬಿಂದು ಬರುವದಿಲ್ಲ. ಉ. ಮಾಮರ, ಮಾಮುಗುಳ್, ಮಾಮಿಡಿ. ಶ ಶಾ 332 ವ್ಯಾ. ಪೊಚ್ಚ–ನೂತನವಾದ; ಅರ್ಥಾಂತರ, ನದಿ. ಪೊಂಗಿರ್ದ–ಸಂತೋಷದಿಂದ ಉಬ್ಬಿದ. ಇಂಗೋಲ್=ಇನಿದು+ಕೋಲ್, ಕಬ್ಬು. ಪಣ್ತ–ಧಾ. ಪಣ್–"ಫಲ ಪರಿಪಾಕೇ, ನಿಯೋಗೇಚ" ಶ. ಶಾ|| 474,475, ಇದಕ್ಕೆ ಭೂತದಲ್ಲಿ ಎರಡು ರೂಪ,'ಪಣ್ತ'=ಫಲಿಸಿದ,'ಪಣ್ದಿದ'=ಮಾಡಿದ. ತೋಂಟಿಗ–ತೋಟಗಾರ.

೮೯. ಬನ್ನ–ದ್ಭ. ಭಗ್ನ. ಕಿನ್ನ–ದ್ಭ. ಖಿನ್ನ. ಪೊಡರ್ಪು–ಪ್ರತಾಪ; ಧಾ. ಪೊಡರ್ ಸ್ಫುರಣೇ. ಉಡುಗಿದ–ನಾಶವಾದ; ಧಾ. ಉಡುಗು, ಸಂಕೋಚನೇ. ನಗು–ಇಲ್ಲಿ ಸಕರ್ಮಕ, ಅಪಹಾಸ್ಯಮಾಡುವದೆಂದರ್ಥ; ಪ್ರ. "ಪಾಂಥರಂ ನಗುವರಾಹರ್ಮ್ಯಾಗ್ರದಬ್ಜಾಕ್ಷಿಯರ್" ರಾಜ. ೮|೮. ಮಲೆವ–ಪ್ರತಿಭಟಿಸುವ; ಧಾ. ಮಲೆ, ಔದ್ಧತ್ಯೇ. ಮಱುವರಸರ್–ಪ್ರತಿರಾಜರು, ಶತ್ರುರಾಜರು; ಪ್ರ. "ಮಱುಮನೆ" "ಮಱುಮಾತು" ನೆತ್ತರ್–ರಕ್ತ. ಪೊತ್ತಿ–ಹೊಸಗನ್ನಡ. ರೂಪ, ಹತ್ತಿ. ನೆರವಿಲ್ಲದೆ–ಇತರಸಹಾಯಾಪೇಕ್ಷೆಯಿಲ್ಲದೆ; ನೆರಂ–ಸಹಾಯ, ಇದರ ಪೂರ್ಣರೂಪ, ನೆರವು. ಕೊಸಗು–ಬೆಟ್ಟದಾವರೆ. ಕದಂಪು, ಕದಂಪು–ಕೆನ್ನೆ, ಬಕುಳ–ದ್ಭ. ವಕುಳ. ಬಿನದ–ದ್ಭ. (ವಿನೋದ) ಪಕಳ್ಕದ–ಆಶ್ರಯ

ವಾದ; ಪ್ರ "ತನಯಂ ತಪಕ್ಕೆ ಪಕಾಗಲೊಡಂ." ಪಂ. ರಾಮಾಯಣ ೬.

೯೦. ಜಡಿವ–ಗದ್ದರಿಸುವ. ಪಡಿಯಱ–ದ್ಭ.ಪ್ರತೀಹಾರ. ಉಜ್ಜುಗ–ದ್ಭ ಉದ್ಯೋಗ.

೯೧. ಸೀಗುರಿ–ಒಂದು ವಿಧವಾದ ಚಾಮರ; ಪ್ರ. "ದವಳವಿಲೋಚನಂ ಧವಳಚಾಮರ ಮಾಗೆ. . . ಅಳಕಜಾಳಮೆ ಸೀಗುರಿಯಾಗೆ" ಅಜಿತನಾಥಪುರಾಣ ೮. ೫. ಇರ್ಕೆಲ=ಎರಡು+ಕೆಲ. ಗೋಸಣೆ–ದ್ಭ. ಘೋಷಣ. ದೂಸರ–ದ್ಭ. ಧೂಸರ, ಬೂದಿಯಬಣ್ಣ. ಚೊಲ್ಲೆಯ–"ತುಱುಬಿನ ಕೊನೆ" ಶಬ್ದಸಾರ. ತಳರ್ದಂ–ಹೊರಟನು.

೯೨. ಸೋರ್ಮುಡಿ–ದೀರ್ಘವಾದ ಕೇಶಪಾಶ. ಸೋಗೆ–ನವಿಲು; ಅರ್ಥಾಂತರ ನವಿಲುಗರಿ ಪೂರ್ಣಪಕ್ಷಿ–೯೩೦ಕ. ದೊರೆಗೊಂಡವು–ಸಮವಾದವು; ದೊರೆ–ಸಮ. ದಾಱಿಡುವಪೋಲ್–ಮುತ್ತಿಗೆ ಹಾಕುವ ಹಾಗೆ; ಪ್ರ. "ವಜ್ರಿಗೆ ತಲ್ಲಣವಾಗೆ ದಿವಕೆ ದಾಱಿಯನಿಟ್ಟೈ" ಪಂಪರಾಮಾಯಣ ೧೪.೮.

೯೩. ಕುಡಿಮಿಂಚು–ಬಳ್ಳಿಯ ತುದಿಯಂತೆ ವಕ್ರವಾದ ಮಿಂಚು. ಕೇಸಡಿ=ಕೆಚ್ಚನೆ+ಅಡಿ. ಶ.ದ. 182. ಕೈಮಿಕ್ಕು–ಹೆಚ್ಚಾಗಿ.

೯೪. ಎಡೆಗಿಱಿದ–ಎಡೆಬಿಡದೆ ತುಂಬಿಕೊಂಡಿರುವ. ಬಿಂಕಗಾತಿಯರ್–ಯೌವನಗರ್ವಿತೆಯರು. ಅರೆಬರ್, ಕಲಬರ್, ಕೆಲಂಬರ್, ಕೆಲರ್, ಪಲರ್, ಪಲಬರ್, ಪಲಂಬರ್, ಒರ್ವರ್ ಇವುಗಳು ಸಮಾನಾರ್ಥಕಗಳು.

೯೫. ಇಸಲ್–ಹೊಡೆಯಲು; ಧಾ. ಇಸು–ಬಾಣಪ್ರಯೋಗೇ. ಜೇವೊಡೆ=ಜೇ (–ದ್ಭ. ಜ್ಯಾ)+ಪೊಡೆ, ಧನುಷ್ಟಂಕಾರ. ನೇವುರ–ದ್ಭ. ನೂಪುರ, ಕಾಲಂದಿಗೆ. ಚೆಲ್ಲಗಾತಿ–"ಸರಸವತಿ" ಶಬ್ದಸಾರ.

೯೬. ಪೀಲಿದಱಿ=ಪೀಲಿ+ತಱಿ, ನವಿಲುಗರಿಯ ಕೊಡೆ.

೯೭. ಸೆಂಡು–ಹೊಸಗನ್ನಡ, ಚೆಂಡು. ಸೊನೆ–ಸೋನೆ. ಬಱಿಯಂ–ಅನಂತರ. ಕೈಮಿಗೆ–ಹೆಚ್ಚಾಗಿ. ಡಂಗುರಂಬೊಯ್ಯುತುಂ–ಸಾರುತ್ತಾ. ತಣ್ಗಾಳಿ–ತಣ್ಣಗಿರುವ ಗಾಳಿ.

೯೯. ಮೆಲ್ಸೋಂಕು=ಮೆಲ್ಲಿತು+ಸೋಂಕು, ಮೃದುಸ್ಪರ್ಶ. ಬೆವರ್–ಬೆವರು. ಜಡಿಪು–ಗಿಳಿಗಳ ಚಪ್ಪರಣೆ. ಎಡೆಗೊಳೆ–ವ್ಯಾಪಿಸಲು.

೧೦೦. ಪಡ್ಡಳಿ–"ಕಣಿಗಿಲೆ" ಶಬ್ದಸಾರ.

೧೦೧. ಸಂತೆ–ದ್ಭ. ಸಂಸ್ಥಾ, ಗುಂಪು. ಪೆಸರ–ಪ್ರಸಿದ್ಧವಾದ. ಕೇದಗೆ–ದ್ಭ. ಕೇತಕೀ, ತಾಳೆಯ ಹೂವು. ಎಸಕಮಂ–ಚೆಂದವನ್ನು.

೧೦೨. ಗುಡಿಗಟ್ಟು–ಧ್ವಜವನ್ನು ಸ್ಥಾಪಿಸುವದು. ಗುಡಿ–ಧ್ವಜ; ಪ್ರ. ಪಂ. ರಾಮಾಯಣ. ೮.೩.೧೧೪. ನೆರೆದು, ತಳೆದು–ಇವು ಮಲ್ಲಿಗೆ ಎಂಬದರಲ್ಲಿ ಅನ್ವಯಿಸುತ್ತವೆ.

೧೦೩. ಎಲೆವಳ್ಳಿಗಳ್–ಕರ್ತೃಪದ. ತರತರದಿಂ–ಕ್ರಮವಾಗಿ. ನೇರ್ಪಡೆ–ಸೇರಿಕೊಳ್ಳಲು; ಧಾ. ನೇರ್ಪಡು, ಸಂಶ್ಲೇಷೇ.

೧೦೪. ಬಿಱ್ತು–ಹೊಸಗನ್ನಡ, ಬಿತ್ತ.

೧೦೫. ಬೆಲೆವೆಣ್ಗಳ+ಅಂದದೆ–ಸೂಳೆಗಳ ಸೌಂದರ್ಯದಿಂದ.

೧೦೬. ಇಟ್ಟಣಿಸಿದ–ಮನೋಹರವಾದ. ಕಟ್ಟುದ್ದ–ಬಹಳ ಎತ್ತರ; ಪ್ರ. "ತೆಂಗಿನ ಮರವೆಷ್ಟುದ್ದ." ಎಱೆವೆಟ್ಟು–"ದಿಣ್ಣೆ" ಚತುರಾಸ್ಯ.

೧೦೮. ಪರಿವಡೆದ–ಪರಿಯುಂ, ಸೌಂದರ್ಯವನ್ನು, ಪಡೆದ, ಹೊಂದಿದ; ಮನೋಹರವಾದ.

೧೦೯. ಪಳುಕು–ದ್ಭ. ಸ್ಫಟಿಕ. ಸಱಿ–ಕಲ್ಲಿನ ಚಪ್ಪಡಿ; ಪ್ರ. "ಪಾಂಡುಕಶಿಲಾತಳಂ ಸೊಗಯಿಸುಗುಂ ||೧೦೦|| ಆಸಱಿಯ ಮಧ್ಯದೊಳ್ ಸಿಂ| ಹಾಸನಂ" ಮಲ್ಲಿನಾಥಪುರಾಣ ೮. ೧೨

೧೧೦. ಪರಿವಿಡಿ–ಕ್ರಮ. ತೊನೆಯುತ್ತೆ–ತಲೆಯನ್ನು ಅಲ್ಲಾಡಿಸುತ್ತಾ. ಕಿಱಿದೆಡೆಯುಂ–ಸ್ಥಾನವಾಚಕಕಾಲವಾಚಕಗಳಾದ ನಾಮಪದಗಳನ್ನು ದ್ವಿತೀಯೆಯಲ್ಲಿ ಪ್ರಯೋಗಿಸುವದುಂಟು. ಉ. 'ಒಂದು ಗಾವುದವಮಂ ಪರಿದಂ.' 'ಒಂದು ಜಾವವಮಂ ತೊಳಲ್ದಂ.' ಶ ದ. 123

೧೧೧ ಬಲುಗಾಯ್–ಬಲ್ಲಿತು+ಕಾಯ್. ಇದು ಹಳಗನ್ನಡ ವ್ಯಾಕರಣದ ಪ್ರಕಾರ 'ಬಲ್ಗಾಯ್' ಎಂದಾಗಬೇಕು. ಹೀಗೆ ಸಂಯುಕ್ತಾಕ್ಷರಗಳ ಮಧ್ಯದಲ್ಲಿ ಇಗಾಗವು ಉಗಾಗವುಗಳನ್ನು ಮಾಡಿ, ಎರಡು ಅಕ್ಷರಗಳನ್ನಾಗಿ ಮಾಡುವ ಪದ್ಧತಿಯು ಪೂರ್ವದಲ್ಲಿ ವಿರಳವಿರಳವಾಗಿದ್ದು ಸುಮಾರು ಐದುನೂರು ಆರುನೂರು ವರ್ಷಗಳಿಂದ ಭಾಷೆಯಲ್ಲಿ ನೆಲೆಗೊಂಡಂತೆ ತೋರುತ್ತದೆ. ಷಟ್ಪದಿಗಳಲ್ಲಿಯೂ, ದಾಸರ ಕೀರ್ತನೆ ಮೊದಲಾದ ಈಗಿನ ಕಾವ್ಯಗಳಲ್ಲಿಯೂ ಈ ಪ್ರಯೋಗವು ವಿಶೇಷವಾಗಿರುವದು. ಉ. ತಳಿರ್ಗೆ, ತಳಿರಿಗೆ; ಬಾಳ್ವಂ, ಬಾಳುವನು; ಅವಂಗೆ, ಅವನಿಗೆ ಇತ್ಯಾದಿ.

೧೧೨. ಕಣ್ಮಲರ್–ಮಲರಂತಪ್ಪ ಕಣ್. ನಾಡೆ–ಚೆನ್ನಾಗಿ. ಇಕ್ಕಿ–ಹೊಡೆದು.

೧೧೫. ಅಚ್ಚರಸಿ–ದ್ಭ. ಅಪ್ಸರಸ್ತ್ರೀ. ಆಅಚ್ಚರಿಸಿ–ಇಲ್ಲಿ ಸಂಧಿಯಿಲ್ಲ. ಶ. ಶಾ||

43. 'ಆದೇ' ಎಂಬ ಸೂತ್ರದಿಂದ ಆ ಕಾರಕ್ಕೆ ಅ ಆ ಕಾರಗಳೂ, ಐ ಔ ಕಾರ ಗಳೂ ಪರವಾದರೆ ಸಂಧಿಯಿಲ್ಲ. ಉ. ಸತಿಯಾಆಯೆಲ್ಲಕಂ, ಆಐಶ್ವರ್ಯಂ, ಆಔನ್ನತ್ಯಂ.

೧೧೬. ಬಿಡೆ-(ಅವ್ಯಯ)ವಿಶೇಷವಾಗಿ. ತುಱುಗಲ್-ಗುಂಪು.

೧೧೭. ಉಳ್ಕಿದಂ-ನಿಜಸ್ಥಿತಿಯನ್ನು; ಧಾ. ಉಳ್, ಸತ್ತಾಯಾಂ.

೧೧೮. ಅಟ್ಟಳೆ-ಹೊಸಗನ್ನಡದಲ್ಲಿ ಅಟ್ಟಣೆ. ಪಱಿವಿಗೆ-ಧ್ವಜ. ದಾವಣ-(?) ಸೊದೆ-ದ್ಭ. ಸುಧಾ, ಸುಣ್ಣ. ಬೀಡು-ಮನೆ; ಮತ್ತೊಂದರ್ಥ, ಸೇನಾನಿವೇಶ.

೧೧೯. ಚದುರ್-ಚಾತುರ್ಯ. ತಕ್ಕುಂ-ಯೋಗ್ಯತೆಯೂ. ಒಡವೆಗಳಂ- ವಸ್ತುಗಳನ್ನು.

೧೨೦. ನಚ್ಚಿನ-ವಿಶ್ವಾಸಕ್ಕೆ ಪಾತ್ರಳಾದ. ಇಚ್ಚೆಗಾರ್ತಿ-"ಇಚ್ಚೆಗಾರ್ತಿ ರತಿ" ಚತುರಾಸ್ಯ.

೧೨೧. ಪೞಿದು-ನಿಂದಿಸಿ.

೧೨೨. ಕಂದು-ಲಾಂಛನ, ಕರೆ. ಹಿವಗದಿರ-ಹಿಮಕಿರಣ, ಚಂದ್ರ.

೧೨೩. ಬೞಿವೞಿ=ಬೞಿ+ಬೞಿ, ಅತ್ಯಂತಸಮೀಪ. ಬಾಳ್ಗಂಬ-ಆನೆ ಯನ್ನು ಕಟ್ಟುವ ಕಂಬ, ಆಲಾನಸ್ತಂಭ; ಪ್ರ. "ಕರಿಗಳ್ ಬಾಳ್ಗಂಬದೊಳೊಪ್ಪಿ ರುತಿರ್ಪುವು" ಗಿರಿಜಾಕಲ್ಯಾಣ ೨. ೭೫. ಕಮ್ಮಂಗೋಲ-ಕಮ್ಮಿತಾದ ಕೋಲುಳ್ಳವಂ, ಮನ್ಮಥ. ನಳಿತೋಳ್-ಕೋಮಲವಾದ ತೋಳು. ತೇಂಕಿ ಸೆಯಿಂ-ತನ್ನ ಕಡೆಗೆ ಹಾರಿಬರುವಂತೆ ಮಾಡಲು. ಅಳವಿಗೞಿದ-ಮಿತಿ ಮೀರಿದ. ಪೆರ್ಕಳ-ಹೆಚ್ಚು; ಹೊಸಗನ್ನಡ 'ಹೆಕ್ಕಳ.'

೧೨೫. ಕಟ್ಟಣಕದ ಕಟ್ಟೆಗೆ-ಬಹಳ ಸುಂದರವಾದ ಕಟ್ಟಡ (?). ನಳನಳಿಸಿ- ಕೋಮಲವಾಗಿ. ಉಡಿ-ನಡು; ಪ್ರ. ಉಡಿದಾರ. ಕೞ್ತಲೆ-ಹೊಸರೂಪ, ಕತ್ತಲೆ.

೧೨೬. ಇಂಬುವೆತ್ತ=ಇಂಬಂ ಪೆತ್ತ, ಮನೋಹರವಾದ. ಸುೞಿತರ್ಪ-ಸು ತ್ತುತ್ತಿರುವ.

೧೨೭. ಓಜೆ-ಬೆಡಗು. ಸೊಬಗು.

೧೨೮. ಕನ್ನಡವಕ್ಕಿ-"ಗಿಳಿ" ಶಬ್ದಸಾರ. ಅಗ್ಗಲಿಸಿದ-ಅಧಿಕವಾದ; ಪ್ರ." ರಾ ಗಮುಗ್ಗಲಿಸಿದ ದೋಷದೃಷ್ಟಿವಿಷಯಾತುರರ್" ಪಂ. ರಾಮಾಯಣ ೬. ಇಂಬಱಿದಿರ್ಪ=ಇಂಬಂ+ಅಱಿದಿರ್ಪ, ಆಶ್ರಯವನ್ನು ತಿಳಿದಿರುವ.

೧೩೦. ಕೇಸಂ-ದ್ಭ. ಕೇಶ, ಕೂದಲು. ದಳವಾದ-ಸಾಂದ್ರವಾದ.

೧೩೨. ಎವೆ-ರಪ್ಪೆಯ ಕೂದಲು.

೧೩೩. ಸಜ಼ಿಮಿಂಡಿ–ಕನ್ಯೆ.

೧೩೪. ಪೊನ್ನೊಡೆಯ–ಕುಬೇರ. ಮೆಯ್ಗಣ್ಣ–ಇಂದ್ರ. ಅಗ್ಗ–ದ್ಭ. ಅರ್ಘ ಶ್ರೇಷ್ಠ. ಬೆಳ್ಮಾಡಿ–ಮರುಳಮಾಡಿ, ಬೆಪ್ಪನಮಾಡಿ. ಬೇಟ್ಟಿಂತುಟು–ಬೇಡುವಷ್ಟು, ಅತಿಯಾಗಿ. ಉಬ್ಬಸ–ಸಂಕಟ ಬರ್ದೆಯರ್–ಪ್ರೌಢಸ್ತ್ರೀಯರು.

೧೩೬. ಮೆಲ್ಪು–ಮಾರ್ದವ. ತಿಜ಼ಿದು–ಕೊಯ್ದು. ಕಾವಂ–ಕಾವನ್ನು. ಈಯುತುಂ, ಕುಡುತುಂ, ನೀಡುತುಂ–ಇವು ಮುಂದಣ ಪದ್ಯದಲ್ಲಿರುವ 'ಕಾದಲೆ' ಎಂಬ ಪದದಲ್ಲಿ ಅನ್ವಯಿಸುತ್ತವೆ. ಹೀಗೆ ಎರಡು ಮೂರು ಶ್ಲೋಕಗಳಿಗೆ ಒಂದೇ ಅನ್ವಯವುಂಟಾದರೆ, ಅವುಗಳಿಗೆ ಸಾಧಾರಣವಾಗಿ ಕುಳಕವೆಂದು ಹೆಸರು.

೧೩೭. ಕಾದಲೆ–ಪ್ರಿಯತಮೆ.

೧೩೯. ಸುಗಿವೆ–ಹೆದರುತ್ತೀವೆಯೆ? ಮಲೆವವರ್–ಪ್ರತಿಭಟಿಸುವವರು. ಕೋಡಗಗಟ್ಟಂ ಕಟ್ಟಿ–ಕಪಿಯನ್ನು ಕಟ್ಟುವ ಹಾಗೆ ಕಟ್ಟಿ. ಬೆಸಸು–ಅಪ್ಪಣೆಯನ್ನು ಕೊಡು; ಧಾ. ಬೆಸಸು. ಒಯ್ಯಗೆ–ಮೆಲ್ಲನೆ.

೧೪೦. ನುಣ್ಪು–ಹೊಸಗನ್ನಡ, ನುಣುಪು. ಎರ್ದೆವತ್ತಿದ–ಎರ್ದೆಯಂ ಪತ್ತಿದ, ಎದೆಯ ಮೇಲೆ ಬಿದ್ದಿರುವ.

೧೪೧. ಸವೆದ–ಮಾಡಿದ. ಪಾಱುಂಬಳೆ–ಚಕ್ರ.

೧೪೨. ಉರವಣೆ–ವೇಗ. ಉಚ್ಚಳಿಸುವ–ಮೇಲಕ್ಕೆ ಹಾರುವ. ತೊಡರ್–ಆಭರಣ. ತೊಡರ್ದು–ಸಿಕ್ಕಿಕೊಂಡು.

೧೪೩. ನೆಲೆವೀಡು–ನೆಲೆಯಾದಮನೆ. ಬೆಕ್ಕಸ–ವಿಸ್ಮಯ.

೧೪೪. ಅಳ್ಕದ–ಹೆದರದ. ಬೆಸಕೈದು–ನಿನ್ನ ಅಪ್ಪಣೆಯ ಪ್ರಕಾರ ನಡೆದು; ಬೆಸ–ಅಪ್ಪಣೆ, ಪ್ರ. "ಆಬಾಲಕನರಸುಮಾಳ್ಪುದಿದು ನಿಮಗೆ ಬೆಸಂ" ಪಂಪ ರಾಮಾಯಣ ೧. ೫೦.

೧೪೫. ದುಟ್ಟಗೊರವ–ದುಷ್ಟನಾದ ಈಶ್ವರನು. ಗೊಟ್ಟಂ–ದ್ಭ. ಗೋಷ್ಠ; ವಾಸಸ್ಥಾನ. ಕಿತ್ತಡಿ–ವ್ರತಿ. ಮರುಳ್ವಡೆ–ಪಿಶಾಚಿಗಳ ಗುಂಪು ನಿಮ್ಮಡಿ–ನೀವು ಎಂಬುದಕ್ಕೆ ಗೌರವಾರ್ಥದಲ್ಲಿ 'ನಿಮ್ಮಡಿ' ಎಂದು ಪ್ರಯೋಗಿಸುವುದುಂಟು, ಈಗಲೂ 'ನಿಮ್ಮಪಾದ' ಎಂದು ಗ್ರಾಮ್ಯಪ್ರಯೋಗವಿದೆ. ಲೆಕ್ಕಿಸದೆ–ಲಕ್ಷ್ಯ ಮಾಡದೆ. ನೇವಳ–ಹಾರ; ಪ್ರ. "ನೇವಾಳಮೆಂದು ಕೆಲಬರ್ । ಪಾವಂ ಪಿಡಿವಂತೆ" ಪಂಪ.ರಾಮಾಯಣ ೬.೪೧.

೧೪೭. ಪುದಿದ–ವ್ಯಾಪ್ತವಾದ. ಆಣೆ–ದ್ಭ. ಆಜ್ಞಾ.

೧೪೮. ಸರಿ–ದ್ಭ. ಝುರಿ, ಪ್ರವಾಹ. ಅಂಚೆ–ಹಂಸ; ಬಟ್ಟೆ, "ಅಂಚೆಯೆಂದು

ಕಪ್ಪಡಂ” ಶಬ್ದಸಾರ. ಬಾಟಿ—ಒಂದು ತರದ ಮಿಾನು; ಬಾಳೆಯ ಮರ. ಆಱಿಡಿ–ಭ್ರಮರ, ತುಂಬಿ, ತೊಂದರೆ. ಕೊಡಗೂಸು–ಕನ್ಯೆ. ಸೋಗೆ–ಕಣ್ಣಿನ ಸೋಗೆ; ನವಿಲುಗರಿ. ಬೆದಂಡೆ–ದ್ಭ·ವೈದಂಡಿಕಾ, ಒಂದು ವಿಧವಾದ ಕಾವ್ಯ; ಇದಕ್ಕೆ ಲಕ್ಷಣ–“ಕಂದಮುಮುಮಳಿನ ವೃತ್ತಮು| ಮೊಂದೊಂದೆಡೆಗೊಂದು ಜಾತಿ ಜಾಣಿಸೆಯೆ ಬೆಡಂ || ಗೊಂದಿವಱಿಕೊಳಮರೆ ಪೇೞಿಲ್ | ಸುಂದರರೂಪಿಂ ಬೆದಂಡೆಗಬ್ಬಮುದಕ್ಕುಂ ||” ಕವಿರಾಜಮಾರ್ಗಾಲಂಕಾರ. ಪಾಡು–ಹಾಡು; ಕಷ್ಟ· ನೆರೆ– ಪಾರ್ಶ್ವ; ಕೂಡುವಿಕೆ. ಪಣ್–ಹಣ್ಣು; ಮಾಡುವದು·

೧೪೯. ತಾರಗೆ—ದ್ಭ. ತಾರಕಾ, ನಕ್ಷತ್ರ. ಮುಬ್ಬು—ಅಂಧಕಾರ. ಬಾಳ್ವಿಲೆ ಪಿಡಿದಂ—ಜೀವದೊಡನೆ ಸೆರೆಹಿಡಿದನು.

೧೫೧. ನೆಯ್—ತುಪ್ಪ; ಪ್ರ. ಜೇನೆಯ್.

೧೫೨. ಅಬ್ಬಿಲುಂ—ಹೊಸಗನ್ನಡ ಅದ್ದಲು. ಪೊಡವಿ—ದ್ಭ.ಪೃಥಿವಿ. ಕೊಂಕಿ–ವಕ್ರವಾಗಿ, ಬಗ್ಗಿ. ತಳ್ಕು–ಆಲಿಂಗನ. ಪಡೆ—ದ್ಭ.ಸ್ಫಟಾ, ಹೆಡೆ. ಬಾಸುಗಿ–ದ್ಭ.ವಾಸುಕಿ, ವಾಸುಕಿಯೆಂಬ ಸರ್ಪ. ದಪ್ಪ–ದ್ಭ,ದರ್ಪ, ಗರ್ವ. ದಪ್ಪಗ–ದ್ಭ. ದರ್ಪಕ, ಮನ್ಮಥ.

೧೫೪. ಜವ–ದ್ಭ.ಯಮ. ಒಂಬತು–ಇದು ಒಂಬತ್ತು ಎಂಬದರ ರೂಪಾಂತರ; ಪ್ರ. “ನಂದನನುತ್ಸಂಗದೊಳ್ | ದೋರ್ಗಂಡ್ವೈದೆರಡೊಂಬತೆಂದು ತೊದಳಿಸೆವಿನಂ” ಚಂದ್ರಪ್ರಭಪುರಾಣ. ಹೀಗೆ ಪತ್ತು ಎಂಬದಕ್ಕೆ ಪತು ಎಂಬ ರೂಪವುಂಟು ; ಪ್ರ. “ಲವಾಕಾಲಂ ಮೂವತೆಣ್ಬುವರೆಯೆನಿಪ” ಪಂ. ರಾಮಾಯಣ ೧. ೫೦. ಗರ–ದ್ಭ.ಗ್ರಹ. ಗೊಂಟು–ದಿಕ್ಕು. ಕಡಂಗಿ–ಉತ್ಸಾಹದೊಡನೆ. ಆಱಲ್–ನಕ್ಷತ್ರ; ರೂಪಾಂತರ, ಅಱಲ್; ಪ್ರ. “ಅಱಲ್ವಟ್ಟೆ”= ಆಕಾಶ. ಐದುಂಮೊಗಮುಳ್ಳನಂ–ಈಶ್ವರನನ್ನು. ಮೂಱಡಿಯಿಟ್ಟಂ–ತ್ರಿವಿಕ್ರಮ, ವಿಷ್ಣು. ಅಚ್ಚಿ–ದ್ಭ. ಅಕ್ಷಿ, ನೇತ್ರ. ಎರಡು+ಅಂತು+ಬಂದಾಗಿ–ಏಕೀಭವಿಸಿ. ಈ ಶ್ಲೋಕದಲ್ಲಿ ಒಂದರಿಂದ ಹತ್ತರವರಿಗೆ ಸಂಖ್ಯೆಗಳೆಲ್ಲಾ ಇರುವವು;ಇದು ಶಬ್ದಚಿತ್ರ.

೧೫೫. ಮುಕ್ಕಣ್ಣ–ಮೂಱು ಕಣ್ಣುಳ್ಳವಂ, ಈಶ್ವರ.

೧೫೬. ಒಡರಿಪುದಂ–ಪ್ರಯತ್ನಪಡುವದನ್ನು.

೧೫೭. ನೆಲದಱಿಕೆಯ–ಜಗದ್ವಿಖ್ಯಾತನಾದ.

೧೫೮. ಗೋಣ್ಮುಱಿಗೊಂಡು–ಕತ್ತನ್ನು ಮುರಿದು, ಶ್ರಮಪಡಿಸಿ. ಅಣ್ಣರ್–ಹೇಡಿಗಳು. ಆರ್ದು–ಆರ್ಭಟಿಸಿ. ಪೋರ್ದ–ಯುದ್ಧಮಾಡಿದ. ಆನೆಮೊಗದ್ಯಾತ–ಗಜಾಸುರ. ಬಲ್ಪುಮೊಗ್ಗೆಗರ್–ಶೂರರು (?)

೧೫೯. ಅಳ್ತನ-ಪರಾಕ್ರಮ. ಕೂರ್ಪವರ್-ಸ್ನೇಹಿತರು. ಇಱಿವೆಂ-ಕೊಲ್ಲುವೆನು. ಅರಸಾಳ್-ರಾಯಭಾರಿ. ಮುಗುಳ್ದು-ಮರಳಿ. ತಿರ-ದ್ಭ.ಸ್ಥಿರ. ಮಂತಣ-ದ್ಭ. ಮಂತ್ರಣ, ಆಲೋಚನೆ.

೧೬೦. ಮಂತಣಿ-ದ್ಭ. ಮಂಥನಾ, ಕಡೆಯುವಿಕೆ, ದಂಡಿಸುವಿಕೆ. ದೂದ-ದ್ಭ.ದೂತ, ಆಳು. ತಪ್ಪಿಲ್_ಹೊಸಗನ್ನಡ, ತಪ್ಪಲು. ಕೆಱಪಱಿದು=ಕೆಱಪಂ+ಅಱಿದು, ಸಮಯವನ್ನು ತಿಳಿದು

೧೬೧. ಬೀರ-ಶೌರ್ಯ. ಬೀರ—ವೀರಭದ್ರ. ನಂಜು-ವಿಷ. ರೂಪು-ದ್ಭ.ರೂಪ.

೧೬೨. ತಿರಿಸುಳಿ-ದ್ಭ. ತ್ರಿಶೂಲಿ, ಈಶ್ವರ. ಇರ್ತರಂ=ಎರಡು+ತರಂ, ಎರಡು ಸಾಲಾಗಿ. ಜತಿ-ದ್ಭ.ಯತಿ.

೧೬೩. ಮಾರ್ಪೊಳೆಪು-ಪ್ರತಿಫಲನ.

೧೬೪. ನುಡಿವೆಣ್-ಸರಸ್ವತಿ. ನಾಲ್ಮೊಗಂ-ಬ್ರಹ್ಮನ ನಾಲ್ಕುಮುಖವೂ. ಒಳಕೆಯ್ಯೆ-ಒಳಗು ಮಾಡಿಕೊಳ್ಳಲು, ಹೊಂದಲು. ನೋೞ್ಪಿರಾ-ಷಷ್ಠಿಯಲ್ಲಿ ದೀರ್ಘಾದೇಶ.

೧೬೫. ದರೆ-ದ್ಭ. ಧರಾ, ಭೂಮಿ. ಕೈಗೊರೆ=ಕೈಗೆ+ ಒರೆ-ಸಮಾನ.

೧೬೬. ಪಾಸ-ದ್ಭ. ಪಾಶ. ಕಣ್ದೆಱೆದಂತೆ-ನೇತ್ರೋನ್ಮೀಲನವಾದಂತೆ, ಕಣ್ಣಿಗೆ ಚೆನ್ನಾಗಿ ಗೋಚರವಾದಂತೆ. ತೊವಲ್-ತೊಗಲು.

೧೬೮. ಹಬ್ಬ-ದ್ಭ. ಪರ್ವ, ಉತ್ಸವ. ಕಱಿಗೊರಲ-ನೀಲಕಂಠ, ಶಿವ.

೧೬೯. ಕುಱಿಲ್ಗೆಯ್ದು-ನಮಸ್ಕರಿಸಿ. ಓಲೆಗಂ-ಆಜ್ಞಾಲೇಖನಕ್ಕೂ. ಉಂಡಿಗೆಗಂ-ಮೊಹರಿಗೂ. ಬಸ—ದ್ಭ.ವಶ, ಸ್ವಾಧೀನ. ಅಱಿವನಿತಂ-ತಿಳಿದಷ್ಟನ್ನು. ಪವಣಲ್ತು-ನನ್ನ ಶಕ್ತಿಗೆ ಮೀರಿ ಇದೆ; ಪವಣ್—ದ್ಭ. ಪ್ರಮಾಣ, ಅಳವು.

೧೭೧. ಕೆಡೆದುದನೆ-ಕೆಳಗೆ ಬಿದ್ದದ್ದನ್ನುಮಾತ್ರ. ಇಲ್ಲಿ ಕವಿಯು ಬಾಣಪ್ರಯೋಗದಲ್ಲಿ ಕರಲಾಘವವನ್ನು ವರ್ಣಿಸಿದಾನೆ.

೧೭೨. ಆಂತರ್—ಪ್ರತಿಭಟಿಸಿದರು. ಕೊಂಬಂ ಪೊರ್ದಿ—ಮರವನ್ನು ಹತ್ತಿ. ನಾಣ್ಗುಂದಿ—ನಾಚಿಕೆಗೆಟ್ಟು.

೧೭೩. ಆವುಗಳ್—ದನಕರುಗಳು.

೧೭೪. ಕೆಳೆಯಂ—ಸ್ನೇಹಿತ. ದೆಸೆವಲಿ—ದ್ಭ.ದಿಶಾಬಲಿ, ದಿಗ್ಬಲಿ. ಪಾಳಿ—ಸೈನ್ಯ; ಇದು ಪಾಡಿ ಎಂಬವರ ರೂಪಾಂತರ. ಪೊಣರ್ದು—ಜಗಳವಾಡಿ.

೧೭೫. ಪರಿದು—ಸುತ್ತಿ. ಸರದಿಂದೆ—ಧ್ವನಿಯಿಂದ.

೧೭೬. ದೊರೆವೆತ್ತ—ಪ್ರಸಿದಿ ಹೊಂದಿದ. ನಲ್ವಗೆಗೊಂಡೊಡೆ—ಒಳ್ಳೆಯ ಮ

ನುಸ್ಸುಳ್ಳವರಾದರೆ, ಸ್ನೇಹಿತರಾದರೆ.

೧೭೭. ತೀರದುದು—ಸಾಧ್ಯವಾಗದ ಕಾರ್ಯವು. ಈಗಡೆ—ಈಗಳೆ, ಈವಾಗಲೇ; ಕನ್ನಡದ ಪದಗಳಲ್ಲಿರುವ 'ಡ' ಕಾರಕ್ಕೆ 'ಳ' ಕಾರಾದೇಶ ಉಂಟು. ಉ. ಆಗಡೆ, ಆಗಳೆ; ಏಡಿಸು, ಏಳಿಸು; ಗಡ, ಗಳ; ಗೆಡೆ, ಗೆಳೆ; ಪಾಡಿ, ಪಾಳಿ, ಇತ್ಯಾದಿ.

೧೭೯. ಬಱಿವಾತು—ವ್ಯರ್ಥಾಲಾಪ. ತಱಿಸಂದಿದುರ್ದಂ—ನಿಶ್ಚಯಿಸಿದುದನ್ನು; ಧಾ. ತಱಿಸಲ್, ನಿಶ್ಚಯೇ.

೧೮೦. ಉರ್ಕ್ಕಾಳ್ಗಳ್—ಉರ್ಕ್ಕಿನ ಆಳ್ಗಳ್, ಉದ್ಧತಭಟರು.

೧೮೧. ಉಬ್ಬಟೆಯ—ಅಧಿಕವಾದ. ಉದ್ದಂಡಱುಚಿದೆ—ಹೆಚಾಗಿ ಹರಟಿದೆ. ಕೇರ್-ಗೋಡೆ. ಮರುಳಂ—ಮೂಢನನ್ನು.

೧೮೨. ಕೋಡುವ-ಭಯಪಡುವ; ಧಾ. ಕೋಡು, ಭಯೇ. ಕೂಂಕುವ—ಓಡಿ ಹೋಗುವ; ಧಾ. ಕೂಂಕು, ಉತ್ಸರ್ಪಣೇ. ನೋಡಿರೆ (ಅವ್ಯಯ)—ನೋಡು. ಪ್ರ. "ನೋಡಿರೆ ಕಿನ್ನರರ್ದಶರಥಕ್ಷಿತಿನಾಥನ ಬೀರದೇಱ್ಗೆಯುಂ| ಪಾಡೆ" ಪಂಪರಾಮಾಯಣ ೧. ೧೭. ಸೂಡುವ—ಮುಡಿದುಕೊಳ್ಳುವ.

೧೮೩. ಮರವಟ್ಟ—ಸ್ತಬ್ಧವಾದ, ಮರದಂತೆ ನಿಂತಿರುವ. ಚಂದವ—ದ್ಭ. ಚಂದ್ರಮಾಃ, ಚಂದ್ರ. ಎಪ್ದ—ಓಡಿ ಹೋದ; ಹೊಸಗನ್ನಡ ಎದ್ದ. ಬೆಳ್ದಾವರೆ—ಬೆಳ್ಳಿಯಂತೆ ಬಿಳುಪಾಗಿರುವ ತಾವರೆ. ಪೊಯ್ದ—ನೆಟ್ಟ. ಕೊಂಬುಗೊಂಡುಸಿರದಿರ್ಪ—ಮರವನ್ನೇರಿ ಮೂಗನ ಹಾಗಿರುವ. ಪೆರ್ಗಡೆ=ಹೊಸಗನ್ನಡ, ಹೆಗ್ಗಡೆ—ಯಜಮಾನ.

೧೮೪. ಐಸರಲ—ಪಂಚಬಾಣ, ಮನ್ಮಥ.

೧೮೮. ತುರಿಪ—ಆತುರ.

೧೮೯. ಲಾಗುಳ—ಯೋಗದಂಡ. ಬಗರಿಗೆ—ಬಕ್ಕರೆ; ಕ. ಶಬ್ದಮಂಜರಿ ೭೩. ಬೆಸನ—ದ್ಭ. ವ್ಯಸನ, ಯೋಚನೆ; ಪ್ರ. "ಶಾಸ್ತ್ರವ್ಯಸನಂ"

೧೯೦. ಅಗುರ್ವಿಸುವ—ಭಯಂಕರವಾದ.

೧೯೧. ಬಳ್ಕುತ್ತೆ—ಬಗ್ಗಿ.

೧೯೨. ಅಳುರ್ಕೆ—ವ್ಯಾಪ್ತಿ. ಅಂಬರವೇ—ನನ್ನ ವರೆಗೇಕೆ.

೧೯೩. ನಿಸ್ಸಾಳ—ವಾದ್ಯವಿಶೇಷ. ಸೂಱಿಸಲ್—ಶಬ್ದಮಾಡುವಂತೆ.

೧೯೪. ತಕ್ಕಡಿಗಾಱಿ=ತಕ್ಕು+ಅಡಿಗೆ+ಆಱಿ, ಯೋಗ್ಯತೆ ಇಂಗಿ ಹೋಗಲು. ನೀರ್ದಾಣಂ- ನೀರಿನ ತಾಣ.

೧೯೫. ಸದೆದು—ಹೊಡೆದು; ಧಾ. ಸದೆ—ಈಷಚ್ಚೂರ್ಣೇ. ಅರೆವೆಣ್ಣ—ಅರ

ನಾರೀಶ್ವರ, ಶಿವ. ಕದಕದಪಂ ತೊಡರ್ಚೆ–ಕಂಪನವನ್ನುಂಟುಮಾಡಿ. ಎಳೆದೇರ–ಎಳೆಯನ್ನು ತೇರಾಗುಳ್ಳವನು, ಈಶ್ವರನು.

೧೯೬. ಪಳಂಚಲೆದು—ಸಂಘಟಿಸಿ. ಮನದನ್ನರ್—ಇಷ್ಟಾನುವರ್ತಿಗಳು. ಸನ್ನಣ—ದ್ಭ. ಸನ್ನಾಹ. ಹಸಾದವನಿಟ್ಟು–ಅಪ್ಪಣೆಯನ್ನು ತೆಗೆದುಕೊಂಡು; ಹಸಾದ–ದ್ಭ. ಪ್ರಸಾದ. ಸಜ್ಜು–ಸಿದ್ಧವಾಗಿರುವಿಕೆ ಚೌವಂದ=ಚೌ+ಅಂದ, ನಾಲ್ಕು ವಿಧ; ಚತುಃ ಎಂಬ ಪದಕ್ಕೆ ಸಮಾಸದಲ್ಲಿ ಚೌಎಂಬ ಆದೇಶ ಬರುತ್ತದೆ. ಉ. ಚೌವಟ್ಟಂ, ಚೌದಂತಂ, ಚೌದೆಸೆ. ಸೆಲವಿತ್ತು—ಅನುಮತಿಯನ್ನು ಕೊಟ್ಟು. ಬಾಡ—ದ್ಭ.ವಾಟ, ಸಾಲು; ಮತ್ತೊಂದರ್ಥ, ಊರು. ತಾಣಂದರ–ದ್ಭ. ಸ್ಥಾನಾಂತರ. ಕೆಂಗಣ್ವಕ್ಕಿ–ಕೋಗಿಲೆ. ಅಲರ್ವಕ್ಕಿ–ದುಂಬಿ. ಪೊಣರ್ವಕ್ಕಿ–ಚಕ್ರವಾಕ. ಪುಸಿವಡೆ–ಮಾಯಾಸೈನ್ಯ. ಬೀರಪಸದನ—ದ್ಭ.ವೀರಪ್ರಸಾಧನ, ವೀರರಿಗೆ ಉಚಿತವಾದ ಆಭರಣಗಳು.

೧೯೮. ನುಗುಳುತ್ತುಂ— ಪ್ರವೇಶಿಸುತ್ತಾ. ಪರಕೆ— ಆಶೀರ್ವಾದ.

೧೯೯. ಮೊಗಸಾಲೆ—ದ್ಭ. ಮುಖಶಾಲಾ. ಚಂಪೆಯ—(?) ಚೌಕಿಗೆ—ದ್ಭ. ಚತುಷ್ಕಿಕಾ.

೨೦೧. ವಾರುವ—ಕುದುರೆ. ಮೋಹರ–ಸೇನೆ. ಒಡ್ಡು–ಸೇನೆ. ಅಮುಳ್ವಕ್ಕಿ–ಚಕ್ರವಾಕ. ಕೊಂತ–ದ್ಭ.ಕುಂತ, ಆಯುಧವಿಶೇಷ. ಅಣಿ–ಸೈನ್ಯ. ಸಂವರಣಿ–ಸಿದ್ಧವಾಗಿರುವಿಕೆ; ಸಂವರಿಸು ಎಂಬದರ ಭಾವನಾಮ.

೨೦೩. ಔಂಕುವಂತಿಡುವ–ಜಗ್ಗಿಹೋಗುವಂತೆ ಅಡಿಯಿಡುವ. ಕಾಲ್ವೊಱೆಯಿಂ–ಕಾಲಿನ ಭಾರದಿಂದ. ಬಡಿಗೆ–ಬಡಿಯುವ ಕೋಲು. ಅಂಕ–ಯುದ್ಧ.

೨೦೪. ಪಲ್ಲಣ—ದ್ಭ. ಪಲ್ಯಾಣ, ಕುದುರೆಯ ಜೀನು. ಮುಸುಂಕೆ— ಆವರಿಸಿಕೊಳ್ಳಲು. ಪಕ್ಕರಕ್ಕೆ—ದ್ಭ.ಪಕ್ಷರಕ್ಷಾ, ಜೂಲು. ಕೊಡಂಕೆ–ಕಿವಿ. ಪೊಳೆವ–ಚಲಿಸುವ; ಧಾ. ಪೊಳೆ, ಲುಠನೇ. ಕೋಳ್ಗೆ–ಪೆಟ್ಟಿಗೆ, ಪ್ರ. "ಪೊಳೆದೆರೆಯ ಕೋಳ್ಗೆ ತೊಲಗಿದ। ನಳಿನಮನೆ" ವೃಷಭೇಂದ್ರವಿಜಯ ೪–೧೧ ತಳರೆ–ಚಲಿಸಲು. ತೇಜಿಯಥಟ್ಟು–ಕುದುರೆಯ ಸೈನ್ಯ.

೨೦೫. ನೇಸಱ–ಸೂರ್ಯ. ತೇರ್–ರಥ. ಪಾಡು–ಅಂದ, ರೀತಿ. ಕೆಳರ್ದು–ಬಿರಿದು ಹೋಗಿ; ಧಾ. ಕೆಳರ್, ವಿಜೃಂಭಣೇ. ಜಂಕೆ—ಆರ್ಭಟಿ. ಕೋಡುವಿನಂ—ನಡುಗಿ ಹೋಗಲು. ತೋರ್ಕೆಯ—ಪ್ರಖ್ಯಾತವಾದ.

೨೦೬. ಪೊಡರ್ಪು–ಪ್ರತಾಪ. ಮಿಱುತ್ತು–ದ್ಭ.ಮೃತ್ಯು. ಮುಂಗಡಿ=ಮುನ್+ಕುಡಿ, ಸೇನಾಮುಖ.

೨೧೭. ಸತ್ತಿಗೆ–ದ್ಭ. ಛತ್ರಿಕಾ, ಕೊಡೆ. ಹಂತಿ–ದ್ಭ. ಪಙ್ಕ್ತಿ, ಸಾಲು.

ನೆಗಱ್‌—ಮೊಸಳೆ. ನೆಗಱ್ಚಿ—ಉಂಟುಮಾಡಲು, ಅದರಂತೆ ಇರಲು.

೨೦೮. ಪಾಡಿ—ಸೈನ್ಯ; ರೂಪಾಂತರ, ಪಾಡು.

೨೧೧. ಎಸಳ್‌—ದಳ. ಗುಱಿ—ಜೂಲು. ಸೀಳ್ಪು ದೈನ್ಯ. ಟೆಕ್ಕೆಯ—ಧ್ವಜ. ಕಡುಗೂರದವರ್‌—ಬಹಳವಾಗಿ ಪರಾಕ್ರಮವಿಲ್ಲದವರು.

೨೧೨. ಅರಗೀಲ್‌—ಅರೇಕಾಲು. ಮಡಂ—ಕಾಡಾಣಿ. ಅಡ್ಡವಂದ—ಅಡ್ಡಲಾಗಿ ಹಾಕಿರುವ. ಮೂಂಕು-ಹೊಸಗನ್ನಡ ಮೂಕಿ.

೨೧೪. ಹರಿಗೆ—ಗುರಾಣಿ.

೨೧೫. ಅಗ್ಗಳಿಕೆ—ಹೆಚ್ಚಿಗೆ, ಮೇಲ್ಮೆ. ಸಬಳ, ಡೊಂಕಣಿ—ಆಯುಧವಿಶೇಷ.

೨೧೬. ನಿಚ್ಚವಯಣ—ದ್ಭ. ನಿತ್ಯಪ್ರಯಾಣ. ತಿಂತಿಣಿವಡೆದ—ಗುಂಪುಗುಂಪಾದ; ಪ್ರ. "ತಿಂತಿಣಿವಣ್ಣನಾಂತಕದಳಿ" ಜಗನ್ನಾಥವಿಜಯ. ೨.

೨೧೮. ತುಱುಗಿ—ಗುಂಪಾಗಿ. ಬೇಡವೆಣ್ಗಿರಿಂ—ಇದನ್ನು ಮುಂದಣ ಗದ್ಯದ 'ಗಾಡಿವಡೆದ' ಎಂಬದರಲ್ಲಿ ಅನ್ವಯಿಸಬೇಕು.

೨೨೦. ಗೊಂದಣ—ಸಮೂಹ. ಸಗ್ಗದಪೆಣ್ಗಿರ್‌—ದೇವಸ್ತ್ರೀಯರು.

೨೨೧. ಮಾಣಂ—ಬಿಡುವದಿಲ್ಲ; ಧಾ. ಮಾಣ್‌, ನಿವಾರಣೇ.

೨೨೨. ಕೊಲ್ಲದುದೆ ದಿಟದಿನಱಂ—'ಅಹಿಂಸಾಪರಮೋಧರ್ಮಃ' ಎಂಬ ಜೈನ ಧರ್ಮ. ಅಱಂ—ಧರ್ಮ. ಬಿಯದ—ದ್ಭ. ವ್ಯಾಧ, ಬೇಡ.

೨೨೪. ಸವಣ—ದ್ಭ. ಶ್ರಮಣ, ಜಿನ. ತಲೆದುಡುಗೆ—ಶಿರೋಭೂಷಣ.

೨೨೫. ತವಸಿಂಗೆ—ತಪಸ್ಸಿಗೆ.

೨೨೬. ಕೊರಲ್ಗೆ—ಇಲ್ಲಿ ಶಿಥಿಲ. ಶಿಥಿಲಾಕ್ಷರಗಳಲ್ಲಿ ಲಕಾರವನ್ನು ದರ್ಪಣಕಾರನು ಸೇರಿಸಿಲ್ಲ. ಆದರೆ ಲಕಾರಕ್ಕೂ ಶಿಥಿಲವುಂಟೆಂದು ತೋರುತ್ತದೆ; ಪ್ರ. "ಪತಿಯುಗಲ್ದವೇಗದಿಂ ದುಃ। ಖಿತೆಯಾಗಿರೆ ಕಂಡು ಕರುಣವಗ್ಗಲಿಸಲ್‌ ॥" ಕಾದಂಬರಿ. ೩೧೦ ಕಯ್ಯ ನಿಕ್ಕಿ—ಕೈಯನ್ನು ಇಳಿಯ ಬಿಟ್ಟುಕೊಂಡು. ಬಗೆಗೊಳ್ವೆಱಕೆ ತಟ್ಟತೆಂಬಿನಂ—ಇದು ಯೋಗಶಾಸ್ತ್ರದ ಚಂದ್ರಕಳಾದರ್ಶನವಾಗಿರಬಹುದು.

೨೨೯. ತನಗೆ, ಸವನಪ್ಪವಂ—ಸಮನಾದವನು, ಪೊಣರ್ದನೆ—ಯುದ್ಧಮಾಡಿದವನೇ ಆದರೆ, ಕಾದುವುದು, ಎಂದನ್ವಯ. ಅಜ್ಜ—ದ್ಭ. ಆರ್ಯ, ಪೂಜ್ಯ. ಅನುವಂ—ರೀತಿಯನ್ನು.

೨೩೦. ಪೞಿವಗೆ=ಪೞಿದು+ಪಗೆ, ಪುರಾತನಶತ್ರುಗಳು, ಅರಿಷಡ್ವರ್ಗಗಳು; ಒಳವಗೆ (-ಅಂತಶ್ಶತ್ರು) ಎಂದು ಪಾಠವಿದ್ದರೆ ಚೆನ್ನಾಗಿತ್ತು. ಒಳಿಯಂಗೆ—ಪರಾಕ್ರಮಶಾಲಿಗೆ.

೨೩೧. ಕಿಱಿಕುಳನೆಂದು_ಹೀನನೆಂದು, ಏಳಿಸಲ್ - ಹಾಸ್ಯ ಮಾಡಬೇಡ, ಮುಂದೆ, ನಿಂದ, ಸವಣನ, ರೂಪು, ಈತೆಱನಲ್ಲವೆ, ಎಂದನ್ವಯು ಏಳಿಸಲ್— ಇಲ್ಲಿ 'ಅಲ್' ಎಂಬುದು ನಿಷೇಧಪ್ರತ್ಯಯು. ಶ. ಶಾ. ೫೨೮

೨೩೨. ಮುಡಿಗಿಕ್ಕಿ-ತಲೆಯಲ್ಲಿ ಕೈಯನ್ನು ಜೋಡಿಸಿ.

೨೩೩. ಉಱಿದೆ-ವೇಗವಾಗಿ, ಅಳವಿಂದೆ-ಪರಾಕ್ರಮದಿಂದ, ಕರಿಕೇಱದೆ - ಸೀದು ಕಪ್ಪಾಗಿ ಹೋಗುವದಿಲ್ಲವೆ. ನಾರಿ — ಬಿಲ್ಲಿನ ಹೆದೆ. ಪಱಿಯದೆ- ಕತ್ತರಿಸಿ ಹೋಗುವದಿಲ್ಲವೆ; ಧಾ. ಪಱಿ, ಕೃಂತನೇ ಸೈತೆ - ನೆಮ್ಮದಿಯಾಗಿ, ಸುಮ್ಮನೆ.

೨೩೪. ಪಱಿವಱಿಯಾದ - ಚೂರು ಚೂರಾದ. ಸುರಿವಮುತ್ತುಗಳಂ—ಮೇಘದಲ್ಲಿಯೂ ಮುತ್ತು ಪುಟ್ಟುತ್ತದೆಂದು ಪ್ರತೀತಿ. ತಂದಲ್ - ಜಲಕಣ. ಅಂಗೈಸುವ—ಆಶೆಪಡುವ. (?) ಚಾದಗೆ -ದ್ಭ. ಚಾತಕ. ಗೆತ್ತು —ಭ್ರಮಿಸಿ; ಧಾ. ಗಿಱು, ಪರಿಭಾವನೇ; ಪ್ರ. "ಮಣಿದೀಧಿತಿಯುಂ ಕಡುಮಿಂಚುಗೆತ್ತು" ಅನುಗೆಯ್ವ—ಯತ್ನಿಸುವ. ಅವ್ವಳಿಸುವ— ಆತುರಪಡುವ. ಮುಂಗುಲಿ—ಮುಂಗುಸಿ. ಕಲಿಲ್ದು — ಬಿದ್ದು. ಈಡಱಿವ-ಕೊಂಬನ್ನು ತೀಡುವ; ಧಾ. ಈಡಿಱಿ, ಶೃಂಗಘರ್ಷಣೇ. ಪರೆದ - ಚದುರಿಹೋದ. ಗುರುಗುಂಜಿ-ಹೊಸಗನ್ನಡ ಗುಲುಗುಂಜಿ. ತುಱುಗಲ್ - ಗುಂಪು. ಕೋಱಿಂಡು—ಹೊಸಗನ್ನಡ ಕೂರಡು. ಮಿಡಿವಿಲ್ಲು—ಸಣ್ಣ ಸಣ್ಣ ಗೋಲಿಯನ್ನು ಹೊಡೆಯುವ ಬಿಲ್ಲು.

೨೩೫. ಪಡಿ—ದ್ಭ. ಪ್ರತಿ, ಸದೃಶ.

೨೩೬. ಚಪ್ಪರಿಪಂತಿರೆ—ಹಾಸ್ಯ ಮಾಡುವ ಹಾಗೆ, ಧಾ. ಚಪ್ಪರಿಸು.

೨೩೭. ಅಣೆವ—ಮುಟ್ಟುವ; ಧಾ. ಅಣೆ, ಸ್ಪರ್ಶನೇ. ಕೋಡು—ದ್ಭ. ಕೂಟ, ಪರ್ವತಶಿಖರ. ತಾಱಿ—ದ್ಭ ತಾಳ, ತಾಳೆಯಮರ.

೨೩೮. ಪೂಗುಡಿ- ಪುಷ್ಪಸ್ತಬಕ. ಮುಡಲ್ಗೊಂಡ-ಹಬ್ಬಿಕೊಂಡ ಮಂಡವಿ— ದ್ಭ. ಮಂಟಪಿಕಾ. ಗೂಡಾರ—ದ್ಭ. ಗೂಢಾಗಾರ. ಬೀಗಿ – ಉಬ್ಬಿ; ಧಾ. ಬೀಗು, ಹರ್ಷಭಾವೇ. ಕಂಡರಿಸಿದಂತೆ—ಶಿಲೆಯಲ್ಲಿ ಕತ್ತಿದ ಹಾಗೆ.

೨೩೯. ನೊಸಲಕಣ್ಣಾಳ್ದವ— ಫಾಲಾಕ್ಷ, ವೀರಭದ್ರ.

೨೪೦. ಪೋಗೊದೆ — ಪೋಗು + ಒದೆ. ಉಗಿದು—ಉಗುರಿನಿಂದ ಕೆರೆದು; ಧಾ. ಉಗಿ, ನಖಕ್ಷತೇ. ಹಿಟ್ಟು— ದ್ಭ. ಪಿಷ್ಟ.

೨೪೧. ಮೂದಲಿಸಿಯಲ್ಲದೆ-ಧಿಕ್ಕಾರ ಮಾಡಿದ ಹೊರತು; ಧಾ. ಮೂದಲಿಸು. ಎಱಗಿದಲ್ಲದೆ-ಮೇಲೆ ಬಿದ್ದಹೊರತು ಸಾಱಿದಲ್ಲದೆ—ಮುಂದೆ ಎಲ್ಲರಿಗೂ ತಿಳಿಯ ಪಡಿಸಿದಲ್ಲದೆ.

೨೪೨. ಒಕ್ಕಲಿಕ್ಕಿ—ಕೊಂದು; ಧಾ. ಒಕ್ಕಲಿಕ್ಕು ಸೂನಿಗೆ—(?) ಭಂಡಿ—ಹೊಸಗನ್ನಡ ಬಂಡಿ. ಭಂಡಣ—'ಕಾಳೆಗಂ' ಶ. ದ. ಪು. 402. ನಚ್ಚಿನ—ವಿಶ್ವಾಸಕ್ಕೆ ಪಾತ್ರನಾದ. ಲೆಂಕ—ಭಂಟ.

೨೪೩. ಬಿಸುಗಣ್ಣ—ಶಿವನು.

೨೪೪. ಗಂಡರ್—ಶೂರರು.

೨೪೬. ಆದಂ (ಅವ್ಯಯ)—ವಿಶೇಷವಾಗಿ.

೨೪೭. ಪುಯ್ಯಲ್—ಶಬ್ದ; ಹೊಸಗನ್ನಡದಲ್ಲಿ ಹುಯ್ಯಲು, ಹುಯ್ಲು.

೨೪೮. ಅಳುರ್ವ—ಪ್ರಸರಿಸುವ. ಸಬುದ—ದ್ಭ. ಶಬ್ದ.

೨೫೦. ಬೀರ—ವೀರಭದ್ರ. ಬೀರವರೆ—ಬೀರ+ಪರೆ (—ಭೇರಿ). ಕಿವುಂಡು—ಹೊಸಗನ್ನಡ ಕಿವುಡು.

೨೫೧. ಮೀನಗೆ—ದ್ಭ. ಮೀನಕ, ಮತ್ಸ್ಯ. ಮೊಗ್ಗರ—ಗುಂಪು.

೨೫೨. ನುಣ್ಬೊಗರ್—ನುಣುಪಾದ ಕಾಂತಿ. ತಳ್ಪೊಯ್ಯೆ—ಹೊಡೆಯಲು. ಪಾಡಿಂತು—ಪಾಡು—(ಸ್ವೈನ್ಯ) + ಇಂತು.

೨೫೩. ಎಕ್ಕೆಕ್ಕೆಯಿಂ—ಒಟ್ಟೊಟ್ಟಿಗೆ. ಪಲ್ಲಣಿಸಿ—ಜೀನುಕಟ್ಟಿ. ನೊಣೆಯುತುಂ—ನುಂಗುತ್ತಲೂ; ಧಾ ನೊಣೆ, ಗಿಳನೇ.

೨೫೪. ಒಲೆದು—ಒಂದು ಕಡೆಗೆ ಬಾಗಿ; ಧಾ. ಒಲೆ, ಆಂದೋಳನೇ. ಓಗರ್ಡಿಸುಗುಂ—ಒಂದು ಕಡೆಗೆ ರಾಶಿಯಾಗಿ ಬೀಳುವದು.

೨೫೬. ಸಾಸಿಗ—ದ್ಭ. ಸಾಹಸಿಕ.

೨೫೭. ಈಂದಂತೆಯುಂ, ಬೆಸಲಾದಂತೆಯುಂ—ಹೆತ್ತಂತೆಯೂ.

೨೫೯. ಮಾಣಿಕವರಿಗೆ—ಮಾಣಿಕ್ಯದ ಹರಿಗೆ, ಗುರಾಣಿ.

೨೬೦. ಪುಡಿ—ದೂಳು. ಓಲಾಡುವ—ಜಲಕೇಳಿಯಾಡುವ.

೨೬೧. ಬೆಚ್ಚಂತೆ—ಬೆಸದಹಾಗೆ ಇರುವ; ಧಾ. ಬಿಸು, ಲೋಹಸಂಧಾನೇ. ಜೊಂಪೆಯ—ಜೂಲು; ಕೆಲವು ಎಕಾರಾಂತವಾದ ಶಬ್ದಗಳಿಗೆ ಅಕಾರಾಂತರೂಪವುಂಟೆಂದು ತೋರುತ್ತದೆ; ಉ. ಜೊಂಪೆ, ಜೊಂಪೆಯು; ಕಣೆ, ಕಣೆಯು; ಪ್ರ. 'ಪಿಂಗದೆ ಸೋರ್ದುದಸ್ತ್ರಮುಖದಿಂ ಕಣೆಯುಂಗಳ ವೃಷ್ಟಿ ಭಿಂಡಿವಾಳಂಗಳ. . ." ಜಗನ್ನಾಥವಿಜಯ ಇತ್ಯಾದಿ. ಪಾಱು—ವಿಮಾನ.

೨೬೪. ಬಚ್ಚಣೆ—ದ್ಭ. ವರ್ಣನಾ, ಬಣ್ಣ. ಜುಂಜು—ಕೋಳಿಯ ತಲೆಯ ಜುಟ್ಟು. ಉಳ್ಕೆ—ಮುಚ್ಚಿ ಹೋಗುವ ಹಾಗೆ; ಧಾ. ಉಳ್ಕು, ದೀಪ್ತೌ. ಗೆಜ್ಜೆಯ, ಬಿಲ್ಗಳ, ಕನ್ನಡಿಯ, ಚೌರಿಯ ಇವುಗಳ ಮುಂದೆ ಪರಿ ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪರಿ—ಸೌಂದರ್ಯ.

೨೬೪. ಕುಂಚ—ಚೌರಿ.

೨೬೫. ಗಜಱಿ- ಗಾಗಳಮಾಡಿ; ಧಾ. ಗಜಱು, ಗರ್ಜನೇ.

೨೬೭. ಕುಡುಮಿಂಚು — ಕೊಂಕು + ಮಿಂಚು. ಗಾಳಿವಟ್ಟೆಯೊಳ್ನಡೆವನ—ಸೂರ್ಯನ.

೨೬೮. ಆರ್ಗಂ ನಿಟ್ಟಿಸಬಾರದು—ಯಾರಿಗೂ ನೋಡುವದಕ್ಕೆ ಸಾಧ್ಯವಲ್ಲ

೨೬೯. ಕುಪ್ಪಳಿಸಿದೊಡಂ—ರಾಶಿಮಾಡದರೂ; ಧಾ. ಕುಪ್ಪಳಿಸು, ಪುಂಜೀಕರಣೇ.

೨೭೦. ಮಣಿಯದೆ—ಹೆದರದೆ, ಧಾ. ಮಣಿ, ನಮಸ್ಕಾರೇ ಭಯೇಚ. ಕಿಱಿಕ್ಕೈದುಗೊಂಡು— ಬಿಚ್ಚುಗತ್ತಿಯನ್ನು ತೆಗೆದುಕೊಂಡು.

೨೭೧. ಪಡಲಿಡೆ—ಕೆಳಗೆ ಬಿದ್ದುಸಾಯಲು. ಪಳಂಚಿದುದು—ಹೊಡೆಯಿತು.

೨೭೨. ಉರ್ಕುಡಿಗಳ್—ಪರಾಕ್ರಮವುಳ್ಳವರು; ಪ್ರಾಚೀನರ ಬಿರುದಾವಳಿಯು ಹೀಗೆಯೆ ರಾಜಶೇಖರದ ೬ನೆಯ ಆಶ್ವಾಸದಲ್ಲಿಯೂ, ಗಿರಿಜಾಕಲ್ಯಾಣದ ೬ನೆಯ ಆಶ್ವಾಸದಲ್ಲಿಯೂ ಕೊಟ್ಟಿದೆ.

೨೭೩. ಕಡುಗ—ದ್ಭ. ಖಡ್ಗ, ಕತ್ತಿ. ಕಡಿಯಾಗೆ—ಚೂರಾಗಲು. ಉಪ್ಪರವೊಯ್ಲು—ಮೇಲುಗಡೆಯ ಪೆಟ್ಟು.

೨೭೪. ಪೂಣ್ದು—ಪ್ರತಿಜ್ಞೆಮಾಡಿ.

೨೭೫. ಬಿಱುವರಿಯ—ನಿಟ್ಟೋಟದ. ತೆಱಪು – ಅವಕಾಶ.

೨೭೬. ಸ್ಪೈಗಱೆಯೆ—ತುಂಬಾಗಿ ಕರೆಯಲು, 'ಸ್ಪೈ' ಎಂಬುದನ್ನು ಧಾತುಗಳ ಹಿಂದೆ ಸೇರಿಸುವರುಂಟು. ಉ. 'ಸ್ಪೈಗಡಿದಂ,' 'ಸ್ಪೈಗೆಡೆದಂ,' ಇತ್ಯಾದಿ. ಅಳುಂಬ—ಅಧಿಕ.

೨೭೭. ಕೆನ್ನೀರೇಱಿಂದೆ— ಕೆನ್ನೀರ್ + ಏಱಿಂದೆ. ಮೆಯಿಕ್ಕಿದರ್—ಸತ್ತರು; ಧಾ ಇಕ್ಕು, ತ್ಯಾಗಹನನಯೋಃ.

೨೭೮. ಕಾಱಿಪ್ಪೊನಲ್ -ಕಾಡಿನ ಪ್ರವಾಹ. ಗೋಱಿಯಲರ್—ಕುದುರೆಯ ಸವಾರರು. ಗೋಱಿ—ದ್ಭ. ಘೋಟಾ.

೨೭೯. ರಾವುತ್ತರ್—ರಾವುತರು.

೨೮೦. ಸೀಸಕ—ದ್ಭ. ಶೀರ್ಷಕ, ಕಿರೀಟ. ಪಕ್ಕರೆ—ಜೂಲು. ತೇಜಿವಾರು-ತೇಜಿಯಬಾರು, ಕುದುರಿಗೆ ಕಟ್ಟಿರುವ ಚರ್ಮದ ಬಾರು.

೨೮೧. ಪೊಂದಿದ-ಸತ್ತ; ಧಾ. ಪೊಂದು, ಮರಣೇ. ಬಿಟ್ಟಿಕ್ಕಿದರ್ — ಬಿಟ್ಟು + ಇಕ್ಕಿದರ್, ನುಗ್ಗಿಸಿ ಹೊಡೆದರು.

೨೮೨. ಕೋಲ್ಗಾರ್—ಶರವರ್ಷ. ಆಲಿವರಲ್—ಆಲಿಕಲ್ಲು. ನೆತ್ತಿ. . . . ಗಳ್—ಆನೆಯ ಕುಂಭಸ್ಥಳಗಳಲ್ಲಿ ಮುತ್ತುಗಳು ಹುಟ್ಟುತ್ತವೆಂದು ಪ್ರಸಿದ್ಧಿಯಿದೆ.

೨೮೩. ಅಗಿದು–ಹೆದರಿ; ಧಾ. ಅಗಿ, ಸಂತ್ರಾಸಹರ್ಷಚರ್ವಣೇಷು. ಜೋಲೆ— ಜೋಲಾಡಿ ಹೋಗಲು.

೨೮೪. ನೆಣ–ವಸೆ. ಜಾದು–ದ್ಭ. ಧಾತು, ಕೆಂಪುಕಲ್ಲು. ಮಗುಟ್ಟಿವಂತೆ– ವಾಂತಿಯನ್ನು ಮಾಡುವ ಹಾಗೆ.

೨೮೫. ಆಗಳೆಈಂಟಿ--ಇಲ್ಲಿ ಸಂಧಿಯಿಲ್ಲ. ಶ. ದ. ೫೬. ಮೆಯ್ಗಲಿಗಳ–ವೀರರ. ಬಕ್ಕಣ–ಹೊಸಗನ್ನಡದಲ್ಲಿ ಬೊಕ್ಕಣ, ತಿಂಡಿ. ಮೆಯ್ಯೊಲೆದು_ಮೆಯ್ಯು ಒಂ ದು ಕಡೆಗೆ ಜೂಗಲಾಡಿ. ಕಯ್ಪಱ--ಕಯ್+ಪಱ, ಕೈಚಪ್ಪಾಳೆ.

೨೮೬. ಕೊಕ್ಕರಿಕೆಯಾದ–ಭೀತಿಯಿಂದ ಅಂಗಸಂಕೋಚವನ್ನುಂಟುಮಾಡಿದ. ಅಲಗನುಗಿದು–ಕತ್ತಿಯನ್ನು ಹಿರಿದುಕೊಂಡು.

೨೮೭. ಎಟ್ಟಿಟ್ಟಿದಂ–ಹಿಂಡಟ್ಟಿದನು; ಧಾ. ಎಟ್ಟಿಟ್ಟು, ಅನುಧಾವನೇ.

೨೮೮. 'ತೇನತೇನವೆಂದು ಮೇಲೆ ಮೇಲೆ' ಶ. ದ. ಪು. 404 ಜಾಱಂಗಲ್ –ಜಾರುಗುಪ್ಪೆ. ಕೂಳುಗುಳ–ಯುದ್ಧ. ಪೊಲಂಬುಗಿಡಿಸೆಯುಂ–ಮಾರ್ಗತ ಪ್ಪಿಸಿಯೂ. ತಾಯ್ಮರಲ್ದೋಱ–ತಳದ ಮರಳು ತೋರುವಂತೆ. ನಿಬ್ಬರ– ದ್ಭ. ನಿರ್ಭರ, ವೇಗವಾಗಿ.

೨೯೦. ಗುಂಡಿಗೆ–ದ್ಭ. ಕುಂಡಿಕಾ, ಜಲಪಾತ್ರೆ. ನೇವರಿಸಿದ–ಸವರಿಕೊಂಡ. ಈಪದ್ಯದಲ್ಲಿ ಈಶ್ವರಮನ್ಮಥರ ಯುದ್ಧವನ್ನು ನೋಡುವದಕ್ಕೆ ತ್ರಿಮೂರ್ತಿ ಗಳಲ್ಲಿ ಒಬ್ಬನಾದ ಈಶ್ವರನು ಬಂದಂತೆ ಹೇಳಿದೆ!!

೨೯೨. ಪರ್ದು–ಗರುಡ.

೨೯೮. ಕೆನ್ನಂ–ವಿಶೇಷವಾಗಿ; ಶ. ದ. 304

೨೯೯. ಗೊಣೆ–ದ್ಭ. ಗುಣ. ಬಿಲ್ಲಿನ ಹೆದೆ.

೩೦೦. ಕೂಡದರ—ಅನುರಾಗವಿದ್ದೂ ಒಂದು ದಿವಸವೂ ಸೇರಲವಕಾಶವಿಲ್ಲ ದವರ. ಬಿರ್ಚಿದೋಪರ–ಅಗಲಿದ ಪ್ರಿಯರ. ನಾಣ್ಗಳ್–ಲಜ್ಜೆಗಳು.

೩೦೨ ಎಡೆಗೊಂಡು–ಎಡೆಗೊಳ್ಳಲು.

೩೦೪. ಕರಿಕು–ಮಸಿ, ಇದ್ದಲು.

೩೦೫. ಈಂಬ–ಹೆರುವ; ಧಾ. ಈನ್, ತಿರ್ಯಕ್ಪ್ರಸವೇ. ಪಣೆದರ–ಈಶ್ವರ.

೩೦೬. ಮಾದೇವಿ–ಪಾರ್ವತಿ. ಕೈಮೊಗ–ಹಸ್ತ. ಕಾವನಂಬುಗಳ್ತಾವೈದುಂ– "ಅರವಿನ್ದಮಶೋಕಂ ಚ ಚೂತಂ ಚ ನವಮಲ್ಲಿಕಾ। ನೀಲೋತ್ಪಲಂಚ ಪಂ ಚೈತೇ ಪಂಚಬಾಣಸ್ಯ ಸಾಯಕಾಃ॥" ಅಮರ

೩೦೮. ಒಟ್ಟಜೆಗೆಟ್ಟು—ಗೌರವವನ್ನು ಹಾಳುಮಾಡಿಕೊಂಡು, ಶಕ್ತಿಗುಂದಿ; "ಒಟ್ಟಜೆ, ಅತಿಶಯಂ" ಶಬ್ದಸಾರ. ನೆಲನನೊಡಂಬಟ್ಟರೆ—ಮೂರ್ಛಿತರಾಗಿ ನೆಲದಲ್ಲಿ ಬೀಳಲು.

೩೧೦ ಅಗುರ್ಬುರ್‍—ಅತಿಶಯ. ಸಾಪದಕ್ಕರ—ಶಾಪಾಕ್ಷರ. ಕೆತ್ತುವ—ನಡುಗುವ. ಕನಲ್ಕೆ—ಕೋಪ. ಕೂರದಂಟು—ಕಠಿನವಾದ ದಂಟು.

೩೧೧. ಕೊಂಬುಗೊಂಡು—ಗುಪ್ತಸ್ಥಲವನ್ನು ಸೇರಿ; ಶ. ದ. ಪು.403 ಮಲ್ಲಱಿ—"ಬೆರಗಪ್ಪ ಭಾವಂ" ಕ. ಶ. ೫೦. ಕೈಮಱಿಯೆ—ಧಾ. ಕೈಮಱಿ, ವಿಸ್ಮಯೇ.

೩೧೨. ಪರಿಗಿಡೆ—ಹರಿಯದಂತೆ, ಅಱಿತುದು—ಒಣಗಿಹೋಯಿತು; ವಿರಹತಾಪಾಧಿಕ್ಯದಿಂದ ಸುರಿವ ಕಣ್ಣನೀರು ಕಪೋಲದ ಮೇಲೆ ಹರಿಯುವದಕ್ಕೆ ಮುಂದೆಯೇ ಆರಿ ಹೋಯಿತು. ಕಱಿಂಗಿ—ಕಪ್ಪಾಗಿ; ಧಾ. ಕಱಿಂಗು—ಕಾರ್ಷ್ಣ್ಯೇ. ದಳ್ಳುರಿ—ಹೆಚ್ಚಾದ ಉರಿ.

೩೧೪. ಕೊರಗಿ—ಒಣಗಿ. ಸೀಕರಿವೋದುದು—ಸೀದು ಕರಿಯಾಗಿ ಹೋಯಿತು.

೩೧೫. ಪಸೆ—ಹೊಸಗನ್ನಡದಲ್ಲಿ ಹಸೆ. ಪಚ್ಚ—ಆಭರಣ. ಜೋಗಿಣಿ—ದ್ಭ. ಯೋಗಿನಿ. ಕೋಱಿಕೆಸಱು—ಕೋಡುವ+ಕೆಸಱು, ಶೀತಲವಾದ ಕರ್ದಮ. ಪಚ್ಚಲೆ—ಪಚ್ಚನೆ+ಎಲೆ, ಹಸಿಯೆಲೆ; "ಪಚ್ಚನೆ" ಎಂಬುದು ವ್ಯಂಜನಾದಿಯಾದ ಪದದೊಡನೆ ಸಮಾಸವಾದರೆ "ಪಂ" ಎಂದೂ, ಸ್ವರಾದಿಯಾದ ಪದದೊಡನೆ ಸಮಾಸವಾದರೆ "ಪಚ್ಚ" ಎಂದೂ ಆಗುತ್ತದೆ. ಉ. "ಪಂದೊವಲ್" "ಪಂದಳಿರ್" "ಪಚ್ಚಡಕೆ." ಇತ್ಯಾದಿ. ನೀರ್ವೆಣ್—ಜಲಮಾನುಷಿ.

೩೧೬. ಕುಳಿರ್ವ—ಶೀತಲವಾದ; ದಿಂಟೆ—ದಿಣ್ಣೆ. ಸಮೆದಿರ್ಪ ಬೆಟ್ಟು—ಕೃತಕಾಚಲ. ಕಾವಣ—ದ್ಭ. ಕಾಯಮಾನ, ಚಪ್ಪರ. ಮಂಡವ—ದ್ಭ. ಮಂಟಪ.

೩೧೭. ಪಱಿವ—ಹಾಸ್ಯಮಾಡುವ; ಧಾ. ಪಱಿ, ನಿಂದಾಯಾಂ.

೩೧೮. ಪುರುಳಿ—ಗಿಳಿ. ಈವೇಂ—"ಎನ್" ಎಂಬ ಉತ್ತಮ ಪುರುಷದ ಏಕವಚನ ಪ್ರತ್ಯಯಕ್ಕೆ "ಏನ್" ಎಂಬ ರೂಪಾಂತರವುಂಟು. ಶ. ಶಾ|| 442

೩೧೯. ಅರಸಾದೆ, ಕೇಳ್ದೈ—ಮಧ್ಯಮಪುರುಷದಲ್ಲಿ ಅಯ್, ಐ, ಎ ಎಂಬ ಪ್ರತ್ಯಯಗಳುಂಟು.

೩೨೧. ಕೈವಂದ—ಫಲಿತವಾದ, ಪ್ರ. "ಬಂದಮಾವು"; ಇಲ್ಲಿ "ಕೈ" ಎಂಬುದು ವಿಶೇಷಾರ್ಥವನ್ನು ಕೊಡುವಂತೆ ತೋರುತ್ತದೆ. ಪ್ರ. ಕೈಮಿಗೆ, ಕೈಮಱಿ, ಇತ್ಯಾದಿ. ಕಸವರ—ಚಿನ್ನ. ನೀಱೆಯ...ತಳಿರ್ತಂತೆಯುಂ—ಸ್ತ್ರೀಯರ ಪಾದಾಘಾತದಿಂದ ಅಶೋಕವೃಕ್ಷವು ಪುಷ್ಪಿಸುವದೆಂದು ವರ್ಣಿಸುವದು ಕವಿಸಮಯ.

೩೨೨. ನಾಚಿಕೆಗೆಟ್ಟು ಓಡಿದ ಬ್ರಹ್ಮನನ್ನು ಹಿಂದಟ್ಟಿದ, ಸಮುದ್ರದಲ್ಲಿ ನಿದ್ರೆಮಾಡುವ ವಿಷ್ಣುವನ್ನು ಜಯಿಸಿದ, ಈಶ್ವರನನ್ನು ಗೆಲ್ದ ಎಮ್ಮೊಡೆಯನು.

೩೨೪. ಅಡಪ—ತಾಂಬೂಲಕರಂಡಕ. ಪವಕೆ-ಕಾಳಂಜಿ. ಬಿಜ್ಜಣಿಗೆ-ದ್ಭ. ವ್ಯಜನಿಕಾ, ಬೀಸಣಿಗೆ. ಕಜ್ಜಳ—ದ್ಭ. ಕಜ್ಜಲ, ಕಣ್ಣುಕಪ್ಪು.

೩೨೫. ತೊಡರ್—ಅಲಂಕಾರ. ಆಟ್ರ್ತಿ—ಆಶೆ.

೩೨೬. ಎಡೆನೆಱೆಯದು—ಸ್ಥಳ ಸಾಲದೆಹೋಯಿತು.

೩೨೯. ನೀಲ್ನ—ದಯಿತನ, ಇಲ್ಲ ಮನ್ಮಥನ.

೩೩೦. ಜಗುಳ್ದು—ಜಾರಿಹೋಗಿ; ಉಡೆ—ಉಡುವ ಬಟ್ಟೆ.

೩೩೨. ಹಮ್ಮದಂ—ಮೂರ್ಖ. ನವಿರ್—ಕೂದಲು. ತೆಳ್ವದಂ-ಮನ್ಮದದ್ರವ. ತವಕಿಪ-ಆತುರಪಡುವ.

೩೩೪. ಪೊದೆದು—ಹೂದ್ದುಕೊಂಡು; ಧಾ. ಪೊದೆ, ಆಚ್ಛಾದನೇ.

೩೩೭. ಐಸರಂ—ಐದು ಎಳೆಯ ಹಾರ.

೩೪೦. ಚೊಕ್ಕಳವಪ್ಪ—ಮನೋಹರವಾದ; "ಚೊಕ್ಕಂ, ಮನೋಹರಂ" ಶಬ್ದ ಸಾರ.

೩೪೨. ನಿಗಳ—ಕಾಲ ತಂಡೆ. ಸೇಸೆ—ದ್ಭ. ಶೇಷಾ, ಅಕ್ಷತೆ.

೩೪೩. ಓರಗೆ—ಸದೃಶ ಆರತಿ—ದ್ಭ. ಆರಾತ್ರಿಕ.

೩೪೭. ಒಲವು+ಎರ್ದೆಯುಂ. ಅತ್ತಳ —ಅತಿಶಯ(?)

೩೪೮. ದೋಸ—ದ್ಭ.ದೋಷ. ಬಾಸಣ—ದ್ಭ.ಭಾಷಣ. ನಾಡ್ಗಳೊಳ್—ನಾಡುಗಳಲ್ಲಿ.

೩೪೯. ಪದಪು—"ಪದಪೆಂದನೆ ಸಂರಂಭಂ." ಚತುರಾಸ್ಯ. ಆಡಿದ ಮಾತೆಲ್ಲರ ಬಾಟ್ಸಿಯುಪ್ಪ—ಸಕಲರಿಗೂ ಹಿತಕರವಾದ ಮಾತುಗಳನ್ನು ಆಡುತ್ತಿರುವ. ತನ್ನಬಿವಟ್ಟೆಗರ್—ತನ್ನ ಧರ್ಮಮಾರ್ಗದಲ್ಲಿ ನಡೆಯುವವರು.

೩೫೦. ಗದ್ಯ. ಪಸುಳೆವಿಸಲ್—ಎಳಬಿಸಲು. ಮಸಕ—ವೇಗ. ಎಸಳ್ಮಿಸುಪ—ದಳವನ್ನು ಬಿಡುತ್ತಿರುವ, ವಿಕಾಸಿಸುತ್ತಿರುವ. ಅಸದಳಂ—ಅಸದೃಶವಾಗಿ. ಬಿಜ್ಜೆವಳ—ದ್ಭ.ವಿದ್ಯಾಬಲ.

## ವೃತ್ತಗಳು.

---

ಈ ಗ್ರಂಥದಲ್ಲಿ ಬರುವ ವರ್ಣವೃತ್ತಗಳು—(1) ಶಾರ್ದೂಲವಿಕ್ರೀಡಿತಂ, (2) ಉತ್ಪಲಮಾಲೆ, (3) ಮತ್ತೇಭವಿಕ್ರೀಡಿತಂ, (4) ಚಂಪಕಮಾಲೆ, (5) ಸ್ರಗ್ಧರೆ, (6) ಮಹಾಸ್ರಗ್ಧರೆ, (7) ಮಾಲಿನಿ; ಮಾತ್ರಾವೃತ್ತಗಳು—(8) ಉತ್ಸಾಹವೃತ್ತ, (9) ಉತ್ಸಾಹರಗಳೆ, (10) ಕಂದ.

ಇವಕ್ಕೆ ಲಕ್ಷಣ— ಉದಾಹರಣೆ.

(1) ಮ–ಸ–ಜ–ಸ–ತ–ತ–ಗಂ|| ಯತಿ ೧೨ನೆಯ ಅಕ್ಷರದಲ್ಲಿ. (ಪದ್ಯ. ೫)
(2) ಭ–ರ–ನ–ಭ–ಭ–ರ–ಲ–ಗಂ|| ೧೧ ,, (ಪ. ೧)
(3) ಸ–ಭ–ರ–ನ–ಮ–ಯ–ಲ–ಗಂ|| ೧೩ ,, (ಪ. ೧೯)
(4) ನ—ಜ—ಭ—ಜ—ಜ—ಜ—ರ|| ೧೩ ,, (ಪ ೩)
(5) ಮ—ರ–ಭ–ನ–ಯ–ಯ–ಯ|| ೭, ೧೪, ೨೧ ,, (ಪ. ೮೮)
(6) ಸ–ತ–ತ—ನ—ಸ—ರ–ರ–ಗಂ|| ೧೫ ,, (ಪ. ೧೧೬)

ಇವು ೬ ವೃತ್ತಗಳು ಕನ್ನಡದಲ್ಲಿ ವಿಶೇಷವಾಗಿ ಬರುವವು; ಇವನ್ನು ಗುರುತು ಹಿಡಿಯುವದಕ್ಕೆ ನಾಗವರ್ಮ ಛಂದಸ್ಸಿನಲ್ಲಿ --

"ಗುರುವೊಂದಾದಿಯೊಳುತ್ಪಲಂ; ಗುರು ಮೊದಲ್ ಮೂರಾಗೆ ಶಾರ್ದೂಲಮಾ|
ಗುರು ನಾಲ್ಕಾಗಿರಲಂತು ಸ್ರಗ್ಧರೆ; ಲಘುದ್ವಂದ್ವಂ ಗುರುದ್ವಂದ್ವಮಾ||
ಗಿರೆ ಮತ್ತೇಭ; ಲಘುದ್ವಯತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ,||
ಹರಿಣಾಕ್ಷೀ, ಲಘುನಾಲ್ಕು ಚಂಪಕಮಿವಾರುಂ ಖ್ಯಾತಕರ್ಣಾಟಕಂ||"

ಎಂದು ಕೊಟ್ಟದೆ.

(7) ನ—ನ—ಮ—ಯ—ಯ|| ಯತಿ ೮ ರಲ್ಲಿ, (ಪ. ೨೩೫)

(8) ಮೂರು ಮಾತ್ರೆಗಳುಳ್ಳ ೭ ಗಣಗಳೂ ಮತ್ತು ಒಂದು ಗುರುವೂ ಪ್ರತಿ ಪಾದದಲ್ಲಿಯೂ ಇರಬೇಕು. ಇದರ ಗಣಗಳು ಸರ್ವಲಘುವಾಗಿಯೂ ಅಥವಾ ಗುರು ಲಘುವಾಗಿಯೂ ಇರಬೇಕೇ ಹೊರತು ಲಘುಗುರುಗಳಾಗಿರ ಕೂಡದು. ಅಲ್ಲದೆ ಈ ವೃತ್ತವು ಲಯಗ್ರಾಹಿಯಾಗಿರ ಬೇಕು. (ಪ. ೨೧೮)

(9) ಗಣ ನಿಯಮಕ್ಕೆ ಒಳಗಾಗದೆ ತಾಳದಗಣನೆಗೊಡಂಬಟ್ಟು ಪ್ರತಿ ಪಾದದಲ್ಲಿಯೂ ಮಾತ್ರೆಗಳು ಸಮವಾಗಿರಲು, ರಗಳೆ; ಅದರಲ್ಲಿ ಪ್ರತಿಪಾದದಲ್ಲಿಯೂ ೨೪ ಮಾತ್ರೆಯುಳ್ಳದ್ದು ಉತ್ಸಾಹರಗಳೆ. (ಪ. ೩೪೪)

(10) "ಅಸಮಾಂಘ್ರಿಗೆಮೂರುಗಣಂಮಸಾಂತ್ಯಜನಮಧ್ಯದಿಂಸಮಕ್ಕಯ್ದುಗಣಂ
ಬೆಸನೆಡೆಗಜಗಣನಿಯಮದಿನೆಸೆವುದು ಕಂದಂ ಚತುಃಕಲದ್ವ್ಯಷ್ಟಗಣಂ||"

ಮೊದಲನೆಯ ಮತ್ತು ಮೂರನೆಯ ಪಾದದಲ್ಲಿ ಮೂರು ಗಣವಿರಬೇಕು; ಎರಡನೆಯ ಮತ್ತು ನಾಲ್ಕನೆಯ ಪಾದದಲ್ಲಿ, ಮಗಣ ಅಥವಾ ಸಗಣವೇ ಕೊನೆಯಾಗಿಯೂ, ಜಗಣ ಅಥವಾ ನಗಣವೇ ಮಧ್ಯವಾಗಿಯೂ ಇರುವ ಐದು ಗಣವಿರಬೇಕು; ಆ ಗಣಗಳಲ್ಲಿ ವಿಷಮಗಣವು ಜಗಣವಾಗಿರಕೂಡದು; ಒಟ್ಟು ಕಂದದಲ್ಲಿ ನಾಲ್ಕು ಮಾತ್ರೆಗಳುಳ್ಳ ಎರಡು ಲ ಗಣಗಳಿರಬೇಕು.

---:0:---